# ಮಹಾಮನೆ



ಸಂಪುಟ : ೮ ಅಕ್ಟೋಬರ್ ೨೦೦೫ ಸಂಚಿಕೆ : ೩ ಬೆಲೆ : ರೂ. ೧೫/-




ಹಾವೇರಿಯಲ್ಲಿ ನಿರ್ಧಾರವಾಗಿರುವ ರಾಜ್ಯಮಟ್ಟದ ಕದಳ ಮಹಿಳಾ ಸಮಾವೇಶದ ಸಮಾಲೋಚನಾ ಸಭೆಯಲ್ಲಿ ಶಾಸಕರಾದ ಶ್ರೀ ಶಿವರಾಜ ಸಜ್ಜನರ ಅವರು ಮಾತನಾಡುತ್ತಿರುವುದು. ವೇದಿಕೆಯಲ್ಲಿ : ಶ್ರೀಮತಿ ಹೇಮಾ ಶಿವರಾಜ ಸಜ್ಜನರ, ಹಾನಗಲ್ಲ ಶಾಸಕರಾದ ಶ್ರೀ ಸಿ.ಎಂ. ಉದಾಸಿ, ಅಧ್ಯಕ್ಷತೆ ವಹಿಸಿದ್ದ ಶ್ರೀ ಎಸ್.ಎಸ್. ಮುಷ್ಠಿ ಮತ್ತು ಅ.ಭಾ.ಶ.ಸಾ.ಪ. ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ. ಕೆಳಗೆ : ಸಭೆಯಲ್ಲಿ ಪಾಲುಗೊಂಡಿದ್ದ ಸಾರ್ವಜನಿಕರು.

(ವರದಿ : ಪುಟ- ೧೯)



## ಮನವಿ

### ಲೇಖಕರಲ್ಲಿ ಬಿನ್ನಹ

- 'ಮಹಾಮನೆ'ಯಲ್ಲಿ ಶರಣ ಸಾಹಿತ್ಯ - ಸಂಸ್ಕೃತಿಗೆ ಸಂಬಂಧಿಸಿದ ಉಪಯುಕ್ತ ಲೇಖನಗಳನ್ನು ಪ್ರಕಟಿಸಲಾಗುತ್ತದೆ.
- ಶರಣ ಕ್ಷೇತ್ರ ಪರಿಚಯ, ಶರಣ ಸಾಹಿತಿಗಳ ಪರಿಚಯ, ಶರಣ ಸಾಹಿತ್ಯ ಕೃತಿಗಳ ಪರಿಚಯದ ಲೇಖನಗಳು 'ಮಹಾಮನೆ'ಯ ಎರಡು ಪುಟಗಳಿಗೆ ಮೀರಬಾರದು.
- ವಿಷಯ ವಿಶ್ಲೇಷಣೆ ಅಥವಾ ವ್ಯಾಖ್ಯಾನ ಸಂಬಂಧ ಲೇಖನಗಳು ಮುದ್ರಿತ ೩-೪ ಪುಟಗಳಿಗೆ ಮೀರಬಾರದು.
- ವಚನ ಸಾಹಿತ್ಯ ಅಥವಾ ಶರಣರ ಜೀವನವನ್ನು ಪ್ರತಿಬಿಂಬಿಸುವ ರೇಖಾ ಚಿತ್ರಗಳಿಗೆ ಅವಕಾಶವುಂಟು.
- ಶರಣ ಕ್ಷೇತ್ರ ಅಥವಾ ಶರಣ ಸಾಹಿತಿಗಳನ್ನು ಕುರಿತ ಲೇಖನಗಳೊಡನೆ ಸಂಬಂಧಪಟ್ಟ ಛಾಯಾಚಿತ್ರಗಳನ್ನು ಕಳುಹಿಸುವುದು ಅಪೇಕ್ಷಣೀಯ.
- ಲೇಖನಗಳನ್ನು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಬೇಕು; ಅಕ್ಷರಗಳು ಸ್ಫುಟವಾಗಿರಬೇಕು.
- ಆಧುನಿಕ ವಚನಕಾರರು ತಮ್ಮ ಹೊಸ ವಚನಗಳನ್ನು ಪ್ರಕಟಣೆಗೆ ಕಳುಹಿಸಬಹುದು.

### ಅನುಭವ ಮಂಟಪ

- ಮಹಾಮನೆಯ ಈ ಅಂಕಣದಲ್ಲಿ ಪ್ರಶ್ನೋತ್ತರಗಳಿಗೆ ಅವಕಾಶ ಕಲ್ಪಿಸಲಾಗಿದೆ. ಇದೊಂದು ಮುಕ್ತ ವಿಚಾರ ವಿನಿಮಯ.
- ಪ್ರಶ್ನೆಗಳು ಗಂಭೀರವಾಗಿರಬೇಕು. ಮುಖ್ಯವಾಗಿ ಶರಣ ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿರಬೇಕು. ಪ್ರಶ್ನೆಗಳು ಸ್ಪಷ್ಟ ಹಾಗೂ ಸಂಕ್ಷಿಪ್ತವಾಗಿರಬೇಕು.
- ವೈಯಕ್ತಿಕ ವಿಷಯಗಳ ಪ್ರಸ್ತಾಪಕ್ಕೆ ಅವಕಾಶವಿಲ್ಲ. ಪ್ರಶ್ನೆಗಳಲ್ಲಿ ಸಾಮೂಹಿಕ ಹಿತದೃಷ್ಟಿಯಿರಬೇಕು.
- ವರ್ಷದ ಕೊನೆಯಲ್ಲಿ ಆಯ್ದ ಪ್ರಶ್ನೋತ್ತರಗಳಿಗೆ ಒಂದು ಸಂಗ್ರಹವನ್ನು ಗ್ರಂಥ ರೂಪದಲ್ಲಿ ತರುವ ವಿಚಾರವಿದೆ.
- ಶರಣ ಸಿದ್ಧಾಂತದ ತಾಂತ್ರಿಕ ಅಂಶಗಳಿಗೆ ಸಂಬಂಧಿಸಿದಂತೆಯೂ ಪ್ರಶ್ನೆಗಳನ್ನು ಕೇಳಬಹುದು.
- ಪ್ರಶ್ನೆಗಳನ್ನು ಒಂದು ಅಂಚೆ ಕಾರ್ಡಿನಲ್ಲಿ ಬರೆದು ಕಳುಹಿಸಿದರೆ ಸಾಕು. ಪ್ರಶ್ನೆ ಕೇಳುವವರು ತಮ್ಮ ಪೂರ್ಣ ಅಂಚೆ ವಿಳಾಸ ತಿಳಿಸಬೇಕು.

## ಗ್ರಂಥ ವಿಮರ್ಶೆ

- 'ಮಹಾಮನೆ'ಯಲ್ಲಿ ಶರಣ ಸಾಹಿತ್ಯ ಮತ್ತು ಸಂಬಂಧಿಸಿದ ಹೊಸ ಪ್ರಕಟಣೆಗಳ ಸಾದರ ಸ್ವೀಕಾರಕ್ಕೆ ಅವಕಾಶವುಂಟು. ಅಂಕಣದ ಪ್ರಕಟಣೆಗೆ ಲೇಖಕರು / ಪ್ರಕಾಶಕರು ತಮ್ಮ ಕೃತಿಗಳ ಒಂದೊಂದು ಪ್ರತಿಯನ್ನು ಕಳುಹಿಸಬೇಕು.
- ವಿಮರ್ಶೆಗಾದರೆ ಪ್ರತಿಯೊಂದು ಕೃತಿಯ ಎರಡೆರಡು ಪ್ರತಿಗಳನ್ನು ಕಳುಹಿಸಬೇಕು. ಅಂತಹ ಕೃತಿಯ ಶೀರ್ಷಿಕಾ ಪುಟದಲ್ಲಿ "ವಿಮರ್ಶೆಯ ಕೃಪೆಗಾಗಿ" ಎಂದು ಬರೆದಿರಬೇಕು.

ವಿ.ಸೂ. ಲೇಖಕರು / ಪ್ರಕಾಶಕರು ಶರಣ ಸಾಹಿತ್ಯ ಪರಿಷತ್ತಿಗೆ ಕಳುಹಿಸುವ ಕೃತಿಗಳನ್ನು ಪರಿಷತ್ತಿನ ಸಾಹಿತ್ಯ ಭಂಡಾರದಲ್ಲಿಟ್ಟು ಓದುಗರಿಗೆ ಆಕರ ಸೌಲಭ್ಯ ಒದಗಿಸಲಾಗುತ್ತದೆ.

ಶರಣ ಸಾಹಿತ್ಯಕ್ಕೆ ಯಾವುದೇ ಕೃತಿಯನ್ನು (ಹಳೆಯದಿರಲಿ, ಹೊಸದಿರಲಿ, ಹಸ್ತಪ್ರತಿಯಿರಲಿ) ಕೊಡುಗೆಯಾಗಿ ಶರಣ ಪರಿಷತ್ತಿನ ಭಂಡಾರಕ್ಕೆ ಕಳುಹಿಸಬಹುದು.

ಸಂಪರ್ಕ ವಿಳಾಸ : ಸಂಪಾದಕರು, 'ಮಹಾಮನೆ', ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
೧ನೆಯ ಮುಖ್ಯರಸ್ತೆ, ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦ ೦೭೦



# ಮಹಾಮನೆ

ಸಂಪುಟ : ೮ | ಅಕ್ಟೋಬರ್ ೨೦೦೫ | ಸಂಚಿಕೆ : ೩

ಅಧ್ಯಕ್ಷರು :
ಗೊ.ರು. ಚನ್ನಬಸಪ್ಪ
ಸಂಪಾದಕರು :
ಎಂ.ಜಿ. ನಾಗರಾಜ್
ಎಚ್.ಎಸ್. ಸಿದ್ಧಗಂಗಪ್ಪ
ಪ್ರಕಾಶಕರು :
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು

ಆಡಳಿತ ಮಂಡಳಿ
೧ನೆಯ ಮುಖ್ಯರಸ್ತೆ, ೮ನೆಯ ವಿಭಾಗ
ಶಿವರಾತ್ರೀಶ್ವರ ವೃತ್ತ
ಜಯನಗರ, ಬೆಂಗಳೂರು - ೫೬೦ ೦೭೦
ದೂರವಾಣಿ : ೨೬೫೪ ೯೩೪೪
ಮುದ್ರಕರು :
ಲಕ್ಷ್ಮಿ ಮುದ್ರಣಾಲಯ
೫ನೆಯ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - ೫೬೦ ೦೧೮
ದೂರವಾಣಿ : ೨೬೬೧ ೩೧೨೩

*ಲೇಖಕರ ಅಭಿಪ್ರಾಯಗಳೆಲ್ಲ*
*ಪರಿಷತ್ತಿನ ಅಭಿಪ್ರಾಯಗಳಲ್ಲ*

## ಬಾಗಿಲು ತೆರೆದರೆ......



## 'ಮಹಾಮನೆ'ಯ ಬಾಗಿಲು ತೆರೆದರೆ......

* *ಅಧ್ಯಕ್ಷರ ನುಡಿ, ಸಂಪಾದಕೀಯ ಬರಹಗಳು*
* *ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕೇಂದ್ರ ಚಟುವಟಿಕೆಗಳು*
* *ಶರಣ ಸಾಹಿತ್ಯ ಕೃತಿಗಳು ಮತ್ತು ಶರಣ ಕ್ಷೇತ್ರಗಳ ಪರಿಚಯ*
* *ಶರಣ ಸಾಹಿತ್ಯದಲ್ಲಿ ಕ್ಷೇತ್ರ ದುಡಿದ, ದುಡಿಯುತ್ತಿರುವ ಮಹನೀಯರ ಪರಿಚಯ*
* *ಆಯ್ದ ವಚನಗಳು ಮತ್ತು ಅವುಗಳ ವಿಶ್ಲೇಷಣೆ*
* *ಶರಣ ಸಾಹಿತ್ಯ – ಸಂಸ್ಕೃತಿಗಳಿಗೆ ಸಂಬಂಧಿಸಿದ ಹೊಸ ಶೋಧಗಳು*
* *ಶರಣ ಸಾಹಿತ್ಯ ಕೃತಿಗಳ ಸಾದರ ಸ್ವೀಕಾರ ಮತ್ತು ವಿಮರ್ಶೆ*
* *ಶರಣ ಸಾಹಿತ್ಯ ಕುರಿತ ಪ್ರೌಢ ಲೇಖನಗಳು*
* *ಆಧುನಿಕ ವಚನಕಾರರ ಹೊಸ ವಚನಗಳು*
* *ಓದುಗರೊಡನೆ ಸಂವಾದ – ಪ್ರಶ್ನೋತ್ತರ ವೇದಿಕೆ*
* *ಶರಣ ಸಿದ್ಧಾಂತ – ತಾಂತ್ರಿಕ ಅಂಶಗಳ ವ್ಯಾಖ್ಯಾನ – ಇತ್ಯಾದಿ*



## ಸಂಪಾದಕೀಯ

# ಅಂಗಶಕ್ತಿ – ಲಿಂಗಶಕ್ತಿ

ಲಯ ಎಂಬುದು ತಾಳಮಾನದ ನಿರಂತರ ಅನುರಣನ. ಅದು ಅನುಭವಿಸುವ ಶ್ರವ್ಯರೂಪ ; ಉಚ್ಚಾರದ ಸಾಮರಸ್ಯ. ಅದು ಸಾಧಿಸಿದರೆ ಧನಾತ್ಮಕವೂ ಹೌದು. ಶ್ರೀಲಯ, ಶಿವಲಯ ಸಂಗಮವೆಂದರೆ ಸತಿಪತಿ ಸಮರಸದ ಭಾವೈಕ್ಯತೆ. ಶಕ್ತಿಸಹಿತನಾದ ಶಿವ ಜಗತ್ತನ್ನು ಸತಿಮಯವಾಗಿಸುತ್ತಾನೆ, ದಾಂಪತ್ಯದ ಶೋಭೆ ತರುತ್ತಾನೆ. ಶಕ್ತಿಮಾಸವು ಈ ದಿಸೆಯಲ್ಲಿ ನವದಿವಸಗಳ ಪ್ರಚ್ಛನ್ನಶಕ್ತಿಯ ಆಡುಂಬೊಲವಾಗಿರುತ್ತದೆ. ಅದಾಗಿ ಶಕ್ತಿಮಾಸದ ಲಯ ಇಡಿಯಾಗಿ ಶ್ರೀಲಯ ಶಿವಲಯ ಕೂಟವಾಗಿ ಸಾಮಗಾನದ ತಲ್ಲೀನತೆಯನ್ನು ನಿದರ್ಶಿಸುತ್ತದೆ. ಅಂಗಸತಿ ದುರ್ಗೆ, ಲಿಂಗಪತಿ ಶಿವನೊಡನೆ ವಿಜೃಂಭಿಸುವ ಮಾಸವಾಗುತ್ತದೆ. ಈ ಕಾರಣವೆ ನವರಾತ್ರಿ ಮುದಕ್ಕೆ ಮೇಳ, ಸಂತೋಷಕ್ಕೆ ಕಳೆ. ದಿನವೂ ಬೆಳಕಿನ ಬೆಳಗು, ರಾತ್ರಿಯಲ್ಲಿ ಬೆಳಕಿನವತಾರಕ್ಕೆ ಉದ್ಭವಕ್ಕೆ ವಿಹಾರದ ಪುಳಕ. ನಿಶಾಂತ್ಯದೊಳುದ್ಭವಿಸಿದ ಅರುಣವೇದಿಕೆಗೆ ಬೆಳಕಿನ ಗರ್ಭ. ಸಂತೋಷವನ್ನು ಮುಂಬೆಳಗಾಗಿ ತರುವ 'ಶಕ್ತಿ'ಯ ಬಾಹ್ಯ ಶರೀರ; ಅದು ಒಳಗಿನಿಂದಲೇ ತೇಜೋತ್ಪನ್ನೆಯಾಗಿರುತ್ತದೆ.

ನಟರಾಜ ಇಡೀ ವಿಶ್ವವನ್ನು ತಬ್ಬಿದ ಭಂಗಿಯಲ್ಲಿ, ಹಸ್ತದಲ್ಲಿ ಜಗತ್ತಿನ ಬೆಳಕು ಹಿಡಿದು ತೋರಿದ್ದಾನೆ. ನಾಟ್ಯಲೀಲೆಯಲ್ಲಿ, ನವಶಕ್ತಿಲೀಲೆಯಲ್ಲಿ, ಬೆಳಕಿನ ಇಡೀ ಆವರಣವಾಗಿಸುತ್ತಾನೆ. ವಿಶ್ವಲಿಂಗರೂಪಿಯಾಗಿ ಅಡಕದಲ್ಲಿ ಕಾಣುತ್ತಾನೆ. ಹಾಗಾಗಿ ಚುಳುಕಾಗಿ ಬೆಳಕಾಗಿ ತನ್ನ ಕರಸ್ಥಲದಲ್ಲಿ ತಾನೆ ಕಾಣಿಸಿಕೊಳ್ಳುತ್ತಾನೆ. ಜಗಕ್ಕೆ ಮಿಗಿಲಾಗಿ ಕಾಣಿಸಿಕೊಳ್ಳುತ್ತಾನೆ. ಅಂದರೆ ಬಿಡಿಯಾಗಿ, ಇಡಿಯಾಗಿ ಶಿವ ಕಾಣುತ್ತಾನೆ. ಲಿಂಗವಾಗಿ ಆಕಾರವಾಗ ಬಲ್ಲಂಥ ಈ ಲಯವೇ ಶ್ರೀಲಯ–ಶಿವಲಯ. ಅಂತೇ ಬಸವಣ್ಣ ಜಗದಗಲ –ಆಳಕ್ಕೂ ಮಿಗಿಲಾಗಿ ಕಾಣುವ ಹರನ ವಿರಾಡ್ರೂಪದಲ್ಲಿ ಅವನ ಶ್ರೀಚರಣವನ್ನು ಪಾತಾಳದಾಚೆ, ಅವನ ಶ್ರೀಮಕುಟವನ್ನು ಬ್ರಹ್ಮಾಂಡ ಬಾನಿನಾಚೆ ಕಾಣುತ್ತ ವರ್ಣಿಸಿದ್ದಾನೆ; 'ಪಾದಾಭಿನ್ನಾಹಿ ಲೋಕಾಯ ಮೌಳಿ ಬ್ರಹ್ಮಾಂಡ ಭಿತ್ತಯೇ' ಎಂದು ಸಾಕ್ಷೀಕರಿಸಿದ್ದಾನೆ. ಅವನು ಬಳಸುವ 'ಶ್ರೀ–ಚರಣ' 'ಶ್ರೀ–ಮಕುಟ' ಶಬ್ದಗಳೇ ಶಿವನ ಅರ್ಧನಾರೀಶ್ವರತ್ವವನ್ನು ಅರ್ಥಾತ್ ಶಕ್ತಿ ಸಹಿತನಾದ ಶಿವನನ್ನು ಸತಿಪತಿ ಸಾಮರಸ್ಯವನ್ನು ಶರಣಸತಿಯೊಡನಾದ ಲಿಂಗಪತಿಯನ್ನು ಶಿವ–ಶ್ರೀಲಯದಲ್ಲಿ ಗ್ರಹಿಸಿದ್ದಾನೆ. ಇಲ್ಲಿ ಬೆಳಕಿನ ಸ್ತಂಭರೂಪವೂ 'ಚರಣ–ಮಕುಟ'ಗಳಲ್ಲಿ ತನ್ಮಯವಾಗಿರುವ ಕಾರಣ ಅದು ಲಿಂಗಯ್ಯನ ಬೆಳಕಿನ ವಿಶ್ವಕೇಂದ್ರವಾಗಿದೆ. ಅಲ್ಲಿ ಮೌನವೇ ಮಾತಿನ ಬೆಳಕಾಗಿ ಆವಿರ್ಭವಿಸುತ್ತದೆ; ಮಾತು ಜ್ಯೋತಿರ್ಲಿಂಗವಾಗಿ ವಿಶ್ವವ್ಯಾಪಿ ಪ್ರಸರಣವಾಗುತ್ತದೆ. ಇವೆಲ್ಲ ಒಂದು ಲಯದ ವ್ರತವಾಗಿ ಬದುಕಿನಲ್ಲಿ ಬಂದಾಗ ಬೆಳಕಿನ ಶೋಭೆ ಮೂಡುತ್ತದೆ. ನವೆದ ರಾತ್ರಿಯಾಗದೆ ನವರಾತ್ರಿಯಾಗಿ ತಾಯಿಶಕ್ತಿ ಕಂಗೊಳಿಸುತ್ತದೆ.

ಕಾಳವ್ವೆ ಹೇಳುತ್ತಾಳೆ : 'ವ್ರತ ಹೋದಾಗಳೆ ಇಷ್ಟಲಿಂಗದ ಕಳೆ ನಷ್ಟವಯ್ಯ, ಅವರು ಲಿಂಗವಿದ್ದೂ ಭವಿಗಳು' ; ಗುಡ್ಡವ್ವೆ ನುಡಿಯುತ್ತಾಳೆ: 'ತನು ಬತ್ತಲೆಯಾದಡೇನು ಮನ ಬತ್ತಲಾಗದನ್ನಕ್ಕ'; ಸತ್ಯಕ್ಕ ಆಡಿದ್ದಾಳೆ : 'ಗಂಡುವೇಷವೆಂಬುದು ನಿಮ್ಮ ಶಕ್ತಿರೂಪು, ಶಂಭುಜಕೇಶ್ವರ ಶಿವಲಿಂಗ ಜಗದೊಳಗೊಬ್ಬನೆ ಗಂಡನು'; ಅಕ್ಕಮ್ಮ ತಿಳಿಸುತ್ತಾಳೆ : 'ಆವ ಪ್ರಕಾರವಾದಡೇನು, ಅರಿವಿನಾಚಾರವೆ ಮುಖ್ಯವಯ್ಯ' ; ಮುಕ್ತಾಯಕ್ಕ ಮಂಡಿಸಿದ್ದಾಳೆ : 'ಆರು ಇಲ್ಲದವಳೆಂದು ಅಳಿಗೊಳಲುಬೇಡ ಅಳಿಗೊಂಡಡೆ ಆನು ಅಂಜುವಳಲ್ಲ, ಒಲವಿನ ಒತ್ತೆಕಲ್ಲನು ಬೆವರಿಸಬಲ್ಲೆ ಕಾಣಿರೋ' – ಈ ಮಾತುಗಳಲ್ಲಿ ಶಕ್ತಿಯ ಸಾನ್ನಿಧ್ಯ, ಅರಿವಿನ ಬೆಳಕಲ್ಲಿ ವೈವಿಧ್ಯದಿಂದ ಕಂಗೊಳಿಸಿರುವುದನ್ನು ಕಾಣಬಹುದು. ಕಾಳವ್ವೆಯ ಮಾತಿನಲ್ಲಿ ಅಂಗದ ಆಚರಣೆಯಲ್ಲಿ ಲೋಪವಾದರೆ, ಇಷ್ಟಲಿಂಗಪೂಜೆ ಯಾಂತ್ರಿಕವಾಗುತ್ತದೆ, ಅದರಲ್ಲಿ ಮುದವಿಲ್ಲದೆ ಸಂತೋಷದ ಭಾವ ಉಕ್ಕುವುದಿಲ್ಲ. ಅಂಗಶಕ್ತಿ ಹ್ರಾಸವಾಗಿ, ಲಿಂಗಶಕ್ತಿಯ ಅರಿವೇ ಒದಗುವುದಿಲ್ಲ ಎಂಬೆಲ್ಲ ಅರ್ಥವು ಉಸಿರುಗೊಂಡಿದೆ. ಗುಡ್ಡವ್ವೆಯಲ್ಲಿ ಅಂತರಂಗ ಶುದ್ಧಿಶಕ್ತಿ ಪಡೆಯದಿದ್ದರೆ ಪ್ರಯೋಜನವಿಲ್ಲ ಎಂಬ ಭಾವವಿದೆ. ಮುಕ್ತಾಯಕ್ಕನಲ್ಲಿ ಅಂಗಶಕ್ತಿಯು ಲಿಂಗಶಕ್ತಿಯ ಸಾಕ್ಷಾತ್ಕಾರಕ್ಕೆ ನೆರವಾಗುತ್ತದೆ. ಲಿಂಗಶಕ್ತಿಯ ಮೆಚ್ಚುಗೆ ಬೇಕಾದರೆ ಅಂಗಶಕ್ತಿ ಸ್ವಯಂಭೂ ಆಗಿಬರಬೇಕು. ಆಗ ಅಂಜದ ಅಳುಕದ ಶಕ್ತಿಯ ಪಲ್ಲವವಾಗುತ್ತದೆ ಎಂದಿದೆ. ಸತ್ಯಕ್ಕನಲ್ಲಿ ಶಕ್ತಿಯ ವೀರ ಪೌರುಷವಂತಿಕೆಯ ಸವಾಲಿದೆ. ಅಕ್ಕಮ್ಮನಲ್ಲಿ ಈ ಶಕ್ತಿಗಳನ್ನು ಯಾರೇ ಅರಿತಾಗಲೇ ಆಚಾರಪೂರ್ಣತೆ ಪುಷ್ಟಿಗೊಳ್ಳುತ್ತದೆ ಎಂಬ ಧ್ವನಿ ಇದೆ. ಈ ಎಲ್ಲ ಮಾತುಗಳೆ ಅಂಗಶಕ್ತಿ; ಅವುಗಳ ಆವಿಷ್ಕರಣವೆ ಬೆಳಗುವ ಲಿಂಗಶಕ್ತಿ. ಇದು ಲಯಗಳ ಪರಸ್ಪರ ಕೂಡಲ ಶಕ್ತಿ ಆಗಿ ಆಚರಣೆಯೂ (ವ್ರತ) ಪರಿಪೂರ್ಣಗಾಮಿ ಎನಿಸುತ್ತದೆ. ಇದನ್ನೆಲ್ಲ ಅಮೂರ್ತವೆಂದು ಭಾವಿಸಿದರೆ ನಮ್ಮ ಬೌದ್ಧಿಕ ಗ್ರಹಿಕೆ ಹಿಂದೆ ಬಿದ್ದಂತಾಗುತ್ತದೆ.

ಲೌಕಿಕ ಚಕ್ಷುವಿಗೆ ಶಿವ ಮಾನವ–ಮೂರ್ತಿರೂಪದಲ್ಲಿ ಗ್ರಹಿಕೆಗೊಳ್ಳುವುದು ಸಹಜ–ಸುಲಭ. ಆದರೆ ತಾತ್ವಿಕ ನೆಲೆಯಲ್ಲಿ ಆಧ್ಯಾತ್ಮಿಕವಾಗಿ ಪರಿಗ್ರಹಿಸುವುದು 'ಲಿಂಗಯ್ಯ'ನ ರೂಪದಲ್ಲಿಯೆ. ಕಾರಣ ನಿಸ್ಸೀಮ ನಿಲುವು ಲಿಂಗಯ್ಯನದು. ಅಲ್ಲಮನೂ 'ನಿಸ್ಸೀಮ ಶರಣನ ನಿಲುವನರಿಯಬಹುದೇ?' ಎಂದ. ಇಲ್ಲೆಲ್ಲ ಶಕ್ತಿಯ ಪ್ರಚ್ಛನ್ನತೆಯನ್ನು ಬಾಹ್ಯ ಪ್ರಕರಣವನ್ನು ಹೋಲಿಸುವ ಪ್ರಕ್ರಿಯೆ ಕಾಣುತ್ತದೆ. ವಿಜ್ಞಾನದ ನೆಲೆಯೂ ಇಲ್ಲಿ ಪಲ್ಲವಿಸಿದ ಅರ್ಥವಾಗುತ್ತದೆ. ಜೀವಭಾವದಲ್ಲಿ ದೇವಭಾವ ಬೆರೆತ ಲಕ್ಷಣವಿದಾಗುತ್ತದೆ. ಅರ್ಥಾತ್ ಅಂಗಶಕ್ತಿಯ ಲಿಂಗಶಕ್ತಿಯ ಲಯಸಮನ್ವಯತೆ ಕಾಣಬರುತ್ತದೆ.

ಈ ನಿಟ್ಟಿನಲ್ಲಿ ವರ್ತಮಾನದ ಸುನಾಮಿ ಚಂಡಮಾರುತ ಹಾಗು ಅತಿವೃಷ್ಟಿಯ ಸಂದರ್ಭದಲ್ಲಿ ಭಾರತದ ಜನತೆ ನೊಂದವರ ನೆರವಿಗೆ ಬಂದ ಬಗೆಯು ಸಾಂಸ್ಕೃತಿಕ ಮಾನವೀಯತೆಯನ್ನು ತೋರಿತು. ಅದೇ ಅಮೇರಿಕೆಯಲ್ಲಿ ಕತ್ರೀನಾದ ಚಂಡಮಾರುತ, ಮಳೆ, ಪ್ರವಾಹದಿಂದ ನೊಂದವರ, ಅಬಲೆಯರ ಮೇಲೆಯೇ ಅತ್ಯಾಚಾರ, ಅನಾಚಾರವೆಸಗಿದ್ದು, ಅಧಿಕಾರಿಗಳು ಕ್ರೀಡಾಂಗಣದ ಮೋಜಿನ ಮರೆಯಲ್ಲಿ ಅಡಗಿದ್ದುದು, ಯಾಂತ್ರಿಕ ಸಂಸ್ಕೃತಿಯ ಸ್ವರೂಪವನ್ನು ಬಯಲಿಗಿಟ್ಟಿತು. ಎರಡನ್ನೂ ತುಲನೆ ಮಾಡಿದರೆ ಅಂಗಶಕ್ತಿ, ಲಿಂಗಶಕ್ತಿಯ ಲಯ ಸಾಫಲ್ಯ, ಯಾಂತ್ರಿಕ ಶಕ್ತಿಯ ಲಯ ವೈಫಲ್ಯಗಳ ಬಗೆಯು ಎದ್ದು ಕಾಣುತ್ತದೆ. ಅಂತೇ ಕಾಳವ್ವೆಯ ಮಾತು ನಿಜಲಯದ ಮಾತು : 'ವ್ರತ ಹೋದಾಗಳೆ ಇಷ್ಟಲಿಂಗದ ಕಳೆ ನಷ್ಟ'–ಸತ್ಯಸ್ಯ ಸತ್ಯ.

*ಬಿಡಿ ಇರಲಿ ಇಡಿ ಇರಲಿ ಬೆಳಕು ಒಳಗಿಂದ*
*ಉಕ್ಕಿ ಬರೆ ಜಗದ ನಿಶೆಯೊಳಗೂ ಅರುಣ ಭವಿಷ್ಯದ ಬಲ*
*ವಿಶ್ವದಗಲಕ್ಕೆ ಆಳಕ್ಕೆ ಚಿಮ್ಮಿಸಿದ ಕಿರಣಲಯ*
*ಲಿಂಗಶಕ್ತಿಯಲಿ ಅಂಗಶಕ್ತಿಯಲಿ ಇಡಿಯಾಗಿ ಬಿಡಿಯಾಗಿ*
*ಅಚಲದೇವನಾಗೊಡೆಯ ನಾನು–ನೀನು ಭೇದವಳಿದ ಬನಿ*
*ಷಟ್‌ಸ್ಥಲದ ವಿಕಸನ ಲಯಕ್ಕೆ ಸಮರಸದ ಚಿರಂತನ ಖನಿ!*

*–ಎಂ.ಜಿ. ನಾಗರಾಜ್*
*ಎಚ್.ಎಸ್. ಸಿದ್ದಗಂಗಪ್ಪ*



## ಅಧ್ಯಕ್ಷರ ನುಡಿ

# ಉತ್ತೇಜನಕ್ಕೆ ಉತ್ತೇಜನ



ನಮ್ಮ ಪರಿಷತ್ತಿನ ಮಹಿಳಾ ರಾಜ್ಯ ಮಟ್ಟದ ಐದನೆಯ ಮಹಿಳಾ ಸಮಾವೇಶ ಸಂಬಂಧ ಪೂರ್ವಭಾವಿ ಸಮಾಲೋಚನೆಗಾಗಿ ಹಾವೇರಿಗೆ ಹೋಗಿದ್ದೆ. ಅಲ್ಲಿನ ಜಿಲ್ಲಾ ಘಟಕ ಮತ್ತು ಕದಳಿ ವೇದಿಕೆಯ ಸೋದರ–ಸೋದರಿಯರಿಗೆ 'ನೀವು ಬಂದು ಉತ್ತೇಜನ ನೀಡಬೇಕು' ಎಂದು ಜಿಲ್ಲಾ ಘಟಕ ಅಧ್ಯಕ್ಷ ಶ್ರೀ ಹನುಮಂತಗೌಡ ಗೊಲ್ಲರ ಅವರು ನನಗೆ ಪತ್ರ ಬರೆದಿದ್ದರು.

ಆ ಸಮಾಲೋಚನ ಸಭೆಯಲ್ಲಿ ಪಾಲುಗೊಂಡಿದ್ದ ಹಾವೇರಿ ಜಿಲ್ಲಾ ಬಂಧುಗಳ ಸಂಖ್ಯೆ ಮತ್ತು ಅವರು ತೋರಿದ ಆಸಕ್ತಿ ಅಭಿಮಾನಗಳನ್ನು ಕಂಡು, ಉತ್ತೇಜನ ನೀಡಬೇಕಾದ ನಾನೇ ಉತ್ತೇಜಿತನಾದ ಅನುಭವವಾಯಿತು. ಅದೊಂದು ಆತ್ಮೀಯ ಹೃದಯಸ್ಪರ್ಶಿ ಸಭೆ. ಜಿಲ್ಲೆಯ ಶರಣ ಸಾಹಿತ್ಯ ಪರಿಷತ್ತು ಮತ್ತು ಕದಳಿ ವೇದಿಕೆಯ ಎಲ್ಲಾ ತಾಲ್ಲೂಕು ಘಟಕಗಳ ಅಧ್ಯಕ್ಷರು ಮತ್ತು ಪದಾಧಿಕಾರಿಗಳೇ ಅಲ್ಲದೆ ಹಾವೇರಿ ನಗರದ ಅನೇಕ ಶರಣ ಸಾಹಿತ್ಯಾಭಿಮಾನಿಗಳು ಸಭೆಗೆ ಬಂದಿದ್ದರು.

ಮುಂದೆ ನಡೆಯಲಿರುವ ರಾಜ್ಯಮಟ್ಟದ ಮಹಿಳಾ ಸಮಾವೇಶಕ್ಕೆ ಮಾಡಿಕೊಳ್ಳಬೇಕಾದ ಸಿದ್ಧತೆ ಕುರಿತು ಸಮಾಲೋಚಿಸಲು ೩೦–೪೦ ಜನ ಪ್ರಮುಖರು ಸಭೆಗೆ ಬಂದರೂ ಸಾಕೆಂದು ನಾನು ಹನುಮಂತಗೌಡ ಗೊಲ್ಲರ ಮತ್ತು ಜಿಲ್ಲಾ ಕದಳಿ ವೇದಿಕೆಯ ಅಧ್ಯಕ್ಷರಾದ ಶ್ರೀಮತಿ ಬಸಮ್ಮ ಹಳಕೊಪ್ಪ ಅವರಿಗೆ ಮೊದಲು ತಿಳಿಸಿದ್ದೆ. ಆದರೆ ೩೦–೪೦ ಜನ ಏಕೆ, ೩೦೦–೪೦೦ ಜನ ಆಸಕ್ತರು ಪಾಲುಗೊಂಡಿದ್ದರು.

ಸ್ಥಳೀಯ ಹುಕ್ಕೇರಿ ಮಠದ ಮಹಿಳಾ ಮಹಾವಿದ್ಯಾಲಯದ ಸಭಾಭವನದಲ್ಲಿ ನಡೆದ ಆ ಸಮಾಲೋಚನ ಸಭೆಯ ಅಧ್ಯಕ್ಷತೆಯನ್ನು ನಗರದ ಹಿರಿಯ ಪ್ರಮುಖರೂ, ಹುಕ್ಕೇರಿಮಠ ಶಿಕ್ಷಣ ಸಂಸ್ಥೆಯ ಅಧ್ಯಕ್ಷರೂ ಆದ ಶ್ರೀ ಎಸ್.ಎಸ್. ಮುಷ್ಠಿ ಅವರು ವಹಿಸಿದ್ದರು. ಸಭಾ ಭವನ ತುಂಬಿದ್ದ ಅಲ್ಲಿನ ಅಭಿಮಾನಿಗಳನ್ನು ಕಂಡು ಹೃದಯ ತುಂಬಿ "ಉದ್ದೇಶಿತ ಸಮಾವೇಶ ನಡೆದಂತೆಯೇ ಆಗಿದೆ" ಎಂದು ನಾನು ಹೇಳಿದೆ.

ಕಾರ್ಯಭಾರದಿಂದ ಸೋತು ಹೋಗಿರುವ ನಾನು ಕರ್ತವ್ಯ ದೃಷ್ಟಿಯಿಂದ ಅಲ್ಲಿಗೆ ಒಂದು ರೀತಿಯಲ್ಲಿ ಯಾಂತ್ರಿಕವಾಗಿಯೇ ಹೋಗಿದ್ದೆ. ಆದರೆ ಆ ಜನರ ಉತ್ಸಾಹ ಮತ್ತು ವಿಶ್ವಾಸಗಳನ್ನು ಕಂಡು, ಬಿಸಿಲಲ್ಲಿ ಬತ್ತಿಹೋಗಿ, ಮಳೆ ಬಂದಾಗ ಮತ್ತೆ ಹಸಿರಾಗುವ ಹುಲ್ಲಿನಂತೆ ನಾನೂ ಉತ್ಸಾಹಿತನಾದೆ. ಸುತ್ತೆಲ್ಲ ನಿರಾಸೆ, ನಿರಾಸಕ್ತಿ, ನಿಗ್ಗರ, ನಿಷ್ಠುರ, ನಿಪಾತ, ನಿರ್ವಿಣ್ಣತೆಗಳನ್ನೇ ಕಾಣುತ್ತಿರುವ ಇಂದಿನ ವಾತಾವರಣದಲ್ಲಿ ಹಾವೇರಿಯಂತಹ ಆಶಾವಾದ, ಆಕಾಂಕ್ಷೆ, ಆಚರಣೆ, ಆತ್ಮವಿಶ್ವಾಸಗಳ ಸಮುದಾಯವನ್ನು ಕಂಡು ಭರವಸೆಯ ಬೆಳಕೊಂದು ಗೋಚರಿಸಿದಂತಾಯಿತು.

ಸಭೆಯಲ್ಲಿ ಪಾಲುಗೊಂಡಿದ್ದವರೆಲ್ಲರಲ್ಲೂ ಯೋಜಿತ ಮಹಿಳಾ ಸಮಾವೇಶವನ್ನು ಹಾವೇರಿಗೆ ಹೆಸರು ಬರುವಂತೆ ನಡೆಸಬೇಕೆಂಬ ಸಂಕಲ್ಪವಿದ್ದುದನ್ನು ನಾನು ಗಮನಿಸಿದೆ. ಸಭೆಯಲ್ಲಿ ಪಾಲುಗೊಂಡಿದ್ದವರಲ್ಲಿ ಸೋದರಿಯರದೇ 'ಬಹುಮತ' ಎಂದು ಬೇರೆ ಹೇಳಬೇಕಾಗಿಲ್ಲ. ಸಭೆಯಲ್ಲಿ ಮಾತನಾಡಿದ ಹಾನಗಲ್ಲ ಶಾಸಕರೂ, ಮಾಜಿ ಸಚಿವರೂ ಆದ ಶ್ರೀ ಸಿ.ಎ. ಉದಾಸಿ ಅವರು ಸಮಾವೇಶಕ್ಕಾಗಿ ತಮ್ಮ ಭಾಗದಿಂದ ಒಂದು ಲಕ್ಷ ರೂ. ಸಂಗ್ರಹಿಸಿಕೊಡುವುದಾಗಿ ಘೋಷಿಸಿದರು. "ಹಾವೇರಿ ಒಂದು ಸ್ವತಂತ್ರ ಜಿಲ್ಲೆಯಾದ ನಂತರ ಮೊದಲ ಬಾರಿಗೆ ನಡೆಯುತ್ತಿರುವ ರಾಜ್ಯಮಟ್ಟದ ಮಹಿಳಾ ಸಮಾವೇಶ ಜಿಲ್ಲೆಯ ಘನತೆ ಗೌರವಗಳಿಗೆ ತಕ್ಕಂತೆ ನಡೆಯುವಂತೆ ಮಾಡೋಣ" ಎಂದು ಕರೆಕೊಟ್ಟರು.

ಸಭಿಕರಲ್ಲೊಬ್ಬರು ಸ್ಥಳೀಯ ಶಾಸಕರಾದ ಶ್ರೀ ಶಿವರಾಜ ಸಜ್ಜನರ ಅವರನ್ನು 'ಸಮಾವೇಶಕ್ಕೆ ನಿಮ್ಮ ಭಾಗದ ಕೊಡುಗೆಯೇನು?' ಎಂದು ಕೇಳಿದಾಗ ಶ್ರೀ ಸಜ್ಜನರ ಕೊಟ್ಟ ಉತ್ತರ ನಿಜಕ್ಕೂ ಸ್ವಾರಸ್ಯವಾಗಿದೆ ಮಾತ್ರವಲ್ಲ, ಮಹಿಳೆಯರ ಸಾಂಸ್ಕೃತಿಕ ಮತ್ತು ಸಾಮಾಜಿಕ ಬದುಕಿನ ಸುಧಾರಣೆಯ ಬಗೆಗೆ ಅವರಿಗಿರುವ ಆಸಕ್ತಿಗೆ ದ್ಯೋತಕವಾಗಿತ್ತು. ಅವರ ಉತ್ತರ : "ಜಿಲ್ಲೆಯ ಎಲ್ಲ ಭಾಗಗಳಿಂದ ಬರುವಷ್ಟು ಕೊಡುಗೆಗಳು ಬರಲಿ. ಎಷ್ಟೇ ಕೊರತೆ ಬಿದ್ದರೂ ನಾವು ನೋಡಿಕೊಳ್ಳುತ್ತೇವೆ".

ಮತ್ತೊಂದು ವಿಶೇಷವೆಂದರೆ ಶ್ರೀ ಶಿವರಾಜ ಸಜ್ಜನರ ಪತ್ನಿ ಶ್ರೀಮತಿ ಹೇಮಾ ಅವರೇ ಸಮಾವೇಶದ ಸ್ವಾಗತ ಸಮಿತಿ ಅಧ್ಯಕ್ಷರಾಗಿದ್ದು, ಸಮಾವೇಶದ ಅಗತ್ಯಗಳನ್ನು ತಮ್ಮ ಪತ್ನಿಯಿಂದ ತಿಳಿದುಕೊಳ್ಳುವುದಾಗಿ ಶ್ರೀ ಶಿವರಾಜ ಸಜ್ಜನರ ಅವರು ಹೇಳಿದ್ದು.

ನಾನು ಈ ಸಮಾಲೋಚನಾ ಸಭೆಯ ಸಂಗತಿಯನ್ನು ಈ ಅಂಕಣದಲ್ಲಿ ಪ್ರಸ್ತಾಪಿಸಿದ ಕಾರಣ, ನಾನು ಮೊದಲೇ ಹೇಳಿರುವಂತೆ, ಹದಗೆಡುತ್ತಿರುವ ನಮ್ಮ ಇಂದಿನ ಪರಿಸರದಲ್ಲಿ ಹಾವೇರಿಯಂತಹ ಆಶಾದೀಪಗಳು ಇನ್ನೂ ಇವೆ ಎಂದು ತಿಳಿಸಲಿಕ್ಕಾಗಿ.

ಪ್ರಸ್ತಾಪಿತ ಸಮಾವೇಶ ಇದೇ ೨೦೦೫ರ ಡಿಸೆಂಬರ್ ೩ ಮತ್ತು ೪ರಂದು ನಡೆಯಬೇಕೆಂದು ನಿರ್ಧರಿಸಲಾಗಿದೆ. ಅಗತ್ಯ ಸಿದ್ಧತೆಗಾಗಿ ಸ್ವಾಗತ ಸಮಿತಿ ಮತ್ತಿತರ ಉಪಸಮಿತಿಗಳ ರಚನೆಯಾಗಿದೆ. ಅಲ್ಲಿನ ಕದಳಿ ಸೋದರಿಯರು ತುಂಬ ಉತ್ಸಾಹದಿಂದ ಕಾರ್ಯೋನ್ಮುಖರಾಗಿದ್ದಾರೆ. ರಾಜ್ಯ ಮತ್ತು ನೆರೆರಾಜ್ಯಗಳಿಂದ ಬರುವ ಸುಮಾರು ಎರಡು ಸಾವಿರಕ್ಕೂ ಹೆಚ್ಚು ಮಹಿಳಾ ಪ್ರತಿನಿಧಿಗಳು ಸಮಾವೇಶದಲ್ಲಿ ಪಾಲುಗೊಳ್ಳುವ ನಿರೀಕ್ಷೆಯಿದೆ.

ಮಹಿಳಾ ಜಾಗೃತಿಯ ದನಿ ದೃಢವಾಗಿ ಕೇಳಿಬರುತ್ತಿರುವ ಇಂದಿನ ಸಂದರ್ಭದಲ್ಲಿ ಹಾವೇರಿಯಲ್ಲಿ ನಡೆಯಲಿರುವ ಮಹಿಳಾ ಸಮಾವೇಶ ಯಶಸ್ವಿಯಾಗುವುದೆಂಬ ನಂಬಿಕೆ ನನಗಿದೆ.

–ಗೊ.ರು. ಚನ್ನಬಸಪ್ಪ

# ಬಂಗಾರದ ಹುಳು

*ಒಂದು ಬಿದಿರಿಗೆ ಕವೆ ಮೂರು, ಆ ಕವೆಯೊಳಗೆ ಲಕ್ಷ ಸಿಬಿರು*
*ಮೂರು ಕವೆ ತೊಟ್ಟಿಸಿ, ಲಕ್ಷ ಸಿಬಿರು ಬಿಡಿಸಿ*
*ಬಿದಿರ ಹೊರೆ ಹೊರೆಯಲ್ಲಿ ನೆಯ್ದಡೆ*
*ತೊಟ್ಟಿಲು ಸಂದು ಕಾಣದಂತೆ ನಾಲ್ಕು ಕಾಲನಿಕ್ಕಿ*
*ಅಂದವಾದ ತೊಟ್ಟಿಲು ದಂಡೆಯನಿಕ್ಕಿ*
*ಶ್ರುತ-ದೃಷ್ಟವೆಂಬೆರಡು ದ್ವಾರದಲ್ಲಿ ತೊಟ್ಟಿಲ ಕಟ್ಟಿ*
*ಗೌರೇಶ್ವರ ಲಿಂಗಕ್ಕೆ ಹುಟ್ಟು ಹೋಗೋ ಎಂದು ಜೋಗುಳವಾಡಿದೆ!*

**-ಮೇದರ ಕೇತಯ್ಯ**

ಮೇದರ ಕೇತಯ್ಯ ಗುಡ್ಡಗಾಡಿನ ಒಬ್ಬ ಕಷ್ಟಜೀವಿ. ಶಿಷ್ಟ ಸಾಹಿತ್ಯ ಅವನ ಮೂಲದ ಬಗೆಗೆ ಏನನ್ನು ಹೇಳದಿದ್ದರೂ ನಮ್ಮ ಜನಪದ ಮರೆತಿಲ್ಲ. ಅವರು ಹಾಡುವ ಹಂತಿಯ ಹಾಡಿನ ಪ್ರಕಾರ ಮೇದರ ಕೇತಯ್ಯ ಹೆಸರೇ ಹೇಳುವಂತೆ ಕಾಡಿನಲ್ಲಿ ಬಿದಿರು ತಂದು ಬುಟ್ಟಿ ತೊಟ್ಟಿಲು ಮಾಡಿ ಮಾರಿ ಬದುಕು ನಡೆಸುತ್ತಿದ್ದವನು. ಅವನಿಗೆ ಸಾತವ್ವನೆಂಬ ಸತಿ ಇದ್ದಳು. ಇಬ್ಬರೂ ಶಿವಭಕ್ತರು.

ಹಾಗಿರುವಾಗ ಕಲ್ಯಾಣದ ಕಡೆಯಿಂದ ಬಂದ ಜಂಗಮನೊಬ್ಬನಿಂದ ಬಸವಣ್ಣ ನಡೆಸುತ್ತಿದ್ದ 'ಕಾಯಕ-ದಾಸೋಹ'ಗಳ ಅನುಭವ ಮಂಟಪದ ಸುದ್ದಿ ಈ ದಂಪತಿಗಳಿಗೆ ತಿಳಿಯುತ್ತದೆ. ಮಲೆನಾಡಿನಲ್ಲಿದ್ದರೂ ತನ್ನ ಮುಗ್ಧಭಕ್ತಿಯಿಂದ ಶಿವಮತವನ್ನು ಆಚರಿಸುತ್ತಿದ್ದ ಕೇತಯ್ಯ ಸತಿ ಸಾತವ್ವನೊಂದಿಗೆ ಕಲ್ಯಾಣಕ್ಕೆ ಬಂದು ಅಲ್ಲೂ ತಮ್ಮ ಕಾಯಕವನ್ನು ಮುಂದುವರೆಸುತ್ತಾರೆ. ಅವರಿಗೆ ಬಸವಣ್ಣನೇ ಪ್ರಾಣ; ಬಸವಣ್ಣನೇ ಚೈತನ್ಯವಾಗುತ್ತಾನೆ.

ಕಲ್ಯಾಣದ ಬೀದಿಗಳಲ್ಲಿ ಕೇತಯ್ಯ ದಂಪತಿಗಳ ಬಿದಿರ ವಸ್ತುಗಳು ಜನಪ್ರಿಯವಾಗುತ್ತವೆ. ಅವರ ಕರಕುಶಲತೆ ಬಳಕೆದಾರರನ್ನು ಬೆರಗುಗೊಳಿಸುತ್ತದೆ. ಕೊಂಡರೆ ಕೇತಯ್ಯ ದಂಪತಿಗಳ ಕೈಯ ಬುಟ್ಟಿ ತೊಟ್ಟಿಲುಗಳನ್ನೇ ಕೊಳ್ಳಬೇಕು ಎನ್ನುತ್ತಾರೆ ಜನ. ಒಳ್ಳೆಯ ವ್ಯಾಪಾರವಾಗುತ್ತದೆ.

ಕೇತಯ್ಯ ದಂಪತಿಗಳು ಮಾರಾಟದ ಹಣದಿಂದ ನಿತ್ಯ ಜಂಗಮ ದಾಸೋಹ ಮಾಡುತ್ತ, ಶರಣರ ಅನುಭಾವ ಪಡೆಯುತ್ತ ನೆಮ್ಮದಿಯ ಬದುಕು ನಡೆಸುತ್ತಿರುತ್ತಾರೆ. ಕೇತಯ್ಯನಂತೂ ತನ್ನ ಕಾಯಕ-ದಾಸೋಹಗಳಿಂದಾಗಿ ಕಲ್ಯಾಣದ ಮನೆ ಮಾತಾಗುತ್ತಾನೆ.

ಇಂತಹ ನಿಷ್ಠೆಯ ಶಿವಭಕ್ತನಿಗೂ ಶಿವಲೀಲೆಯ ಒಂದು ಭಕ್ತಿ ಪರೀಕ್ಷಾ ಪ್ರಸಂಗ ಎದುರಾಗುತ್ತದೆ. ಒಂದು ದಿನ ಕೇತಯ್ಯ ಎಂದಿನಂತೆ ಕಾಡಿಗೆ ಬಿದಿರು ತರಲು ಹೋಗುತ್ತಾನೆ. ಬಿದಿರ ಬುಡಕ್ಕೆ ಕೊಡಲಿ ಹಾಕುತ್ತಾನೆ. ಆಶ್ಚರ್ಯ! ಬಿದಿರ ಕೊಳವೆಯಿಂದ ಹೊಳೆಯುವ ಹೊನ್ನು ಸುರಿಯುತ್ತದೆ. ಅದನ್ನು ಕಂಡ ಕೇತಯ್ಯನಿಗೆ ಆಶ್ಚರ್ಯವಾದರೂ ಆಸೆ ಹುಟ್ಟಲಿಲ್ಲ! ಅದು ತನ್ನ ಕಾಯಕದ ಫಲವಲ್ಲವಾದ ಕಾರಣ ಅದನ್ನು ಮುಟ್ಟುವುದು ಸಲ್ಲದು ಎಂದು ಭಾವಿಸಿ, ಮತ್ತೊಂದು ಬಿದಿರಿನ ಬಳಿ ಹೋಗಿ ಕೊಡಲಿ ಹಾಕಿದರೆ ಅಲ್ಲೂ ಅದೇ ಅನುಭವ ವಾಗಬೇಕೇ?

ಕೇತಯ್ಯ ಮತ್ತೆ ಬೇರೆ ಬಿದಿರಿಗೆ ಕೊಡಲಿ ಹಾಕಿದ. ಹೀಗೆ ಅವನು ಕೊಡಲಿ ಹಾಕಿದೆಡೆಯಲ್ಲೆಲ್ಲಾ ಹೊನ್ನು ಉದುರುವುದನ್ನು ಕಂಡು ಅವೆಲ್ಲ 'ಬಂಗಾರದ ಹುಳು' ಹತ್ತಿದ ಬಿದಿರೆಂದು ತಿಳಿದ. ದಿನ ಮಧ್ಯಾಹ್ನ ಅಲೆದಾಡಿದರೂ 'ಹುಳು' ಹತ್ತದ ಬಿದಿರು ದೊರೆಯಲಿಲ್ಲ. ಅಂದಿನ ದಾಸೋಹ ಸೇವೆಗೆ ಭಂಗವಾಯಿತೆಂಬ ಚಿಂತೆ ಕೇತಯ್ಯನಿಗೆ.

ಸಂಜೆಯಾಗುತ್ತ ಬಂತು. ಅಷ್ಟರಲ್ಲಿ ಕಂಡ ಸಮೃದ್ಧವಾಗಿದ್ದ ಮತ್ತೊಂದು ಬಿದಿರ ಮೆಳೆಯೊಂದಕ್ಕೆ ಕೊಡಲಿ ಹಾಕಿ ನೋಡಲು ವಿಚಾರ ಮಾಡಿದ. ಅದರ ಬುಡಕ್ಕೆ ಬದಲಾಗಿ ನಡುವಿಗೆ ಕೊಡಲಿ ಹಾಕಬೇಕೆಂದು ಗಿಡವೊಂದನ್ನು ಹತ್ತಿದ. ಬಿದಿರು ಕಡಿಯುತ್ತಿದ್ದಂತೆ ಆಕಸ್ಮಿಕವಾಗಿ ಜಾರಿ ಕೆಳಗೆ ಬಿದ್ದುಬಿಟ್ಟ. ಬಿದ್ದ ಭರದಲ್ಲಿ ಬುಡದಲ್ಲಿದ್ದ ಬಿದಿರಿನ ಕೂಳೆಯೊಂದು ಅವನ ಎದೆಗೆ ನೆಟ್ಟು ಬಿಟ್ಟಿತು; ರಕ್ತ ಚಿಮ್ಮಿತು.

ಆದರೂ ಮನೆಗೆ ಹೋಗಿ ಅಂದಿನ ಕಾಯಕ-ದಾಸೋಹ ಸೇವೆಗಳನ್ನು ಸಲ್ಲಿಸಬೇಕೆಂಬ ಶರಣಛಲದಿಂದ ನೆಟ್ಟಿದ್ದ ಕೂಳೆಯನ್ನು ಹಾಗೆಯೇ ಒತ್ತಿ ಹಿಡಿದು ಬಿದಿರಿನ ಹೊರೆ ಹೊತ್ತು ಮನೆಗೆ ಬರುತ್ತಾನೆ. ದಂಪತಿಗಳಿಬ್ಬರೂ ತಡಮಾಡದೆ ಬುಟ್ಟಿ ಹೆಣೆಯುತ್ತಾರೆ. ಪೇಟೆಗೆ ಹೋಗಿ ಮಾರಿಕೊಂಡು ಬರಲು ಹೆಂಡತಿಗೆ ಹೇಳುತ್ತಾನೆ ಕೇತಯ್ಯ. ಗಂಡನ ಸೂಚನೆಯಂತೆ ಸಾತವ್ವ ಬುಟ್ಟಿ ಮಾರಿ ತಂದ ಹಣದಿಂದ ಸಂಜೆ ಜಂಗಮ ದಾಸೋಹಸೇವೆ ನಡೆಸುತ್ತಾಳೆ.

ದಾಸೋಹ ಸೇವೆ ಮುಗಿಯಿತೆಂದು ತಿಳಿದ ಕೂಡಲೇ ಕೇತಯ್ಯ ತನ್ನ ಹೆಂಡತಿಗೆ ತನ್ನ ಎದೆಯಲ್ಲಿ ನೆಟ್ಟಿದ್ದ ಬಿದಿರಿನ ಕೂಳೆಯನ್ನು ಕೀಳಲು ಹೇಳುತ್ತಾನೆ. ಆ ಶರಣಸತಿ ಪತಿಯಾಜ್ಞೆ ಪಾಲಿಸುತ್ತಾಳೆ. ಮತ್ತಷ್ಟು ರಕ್ತ ಚಿಲುಮೆಯಂತೆ ಚಿಮ್ಮುತ್ತದೆ. ಶಿವನ ಒಲುಮೆಗಾಗಿ ಕಾದಿದ್ದ ಕೇತಯ್ಯ ಕಣ್ಣು ಮುಚ್ಚುತ್ತಾನೆ.

ಈ ಸುದ್ದಿ ಕಲ್ಯಾಣ ನಗರದ ಎಲ್ಲೆಡೆಗೂ ಹಬ್ಬಲು ತಡವಾಗಲಿಲ್ಲ. ಸುದ್ದಿ ಕೇಳಿ ತಕ್ಷಣ ಬಸವಣ್ಣನ ಪ್ರಾಣವೂ ಹೋಯಿತೆಂದೂ, ಮಡಿವಾಳ ಮಾಚಯ್ಯನ ಅಚಲಭಕ್ತಿಯ ವೀರಘಂಟೆಯ ನಾದದಿಂದ ಕೇತಯ್ಯ-ಬಸವಣ್ಣ ಇಬ್ಬರೂ 'ಶಿವಯೋಗ ನಿದ್ರೆಯಿಂದ ಎಚ್ಚರಾದ'ರೆಂದೂ ಹೇಳಲಾಗುತ್ತದೆ.

ಶರಣರಿಗೆ ಕಾಯಕ ಮತ್ತು ದಾಸೋಹಗಳೇ ಪ್ರಾಣವಾಗಿದ್ದು ವೆಂಬುದಕ್ಕೆ ಮೇದರ ಕೇತಯ್ಯನ ಈ ಪ್ರಸಂಗ ಪ್ರಮಾಣವಾಗಿದೆ. ಶರಣರು ತಮ್ಮ ಶ್ರಮದಿಂದಲ್ಲದೆ ಹೊನ್ನು ಸಿಕ್ಕಿದರೂ ಹುಳು ಎಂದು ಪರಿಗಣಿಸುತ್ತಾರೆ. ಕಾಯಕ-ದಾಸೋಹಕ್ಕಾಗಿ ಅವರಿಗೆ ನೋವಿದ್ದರೂ ನರಳುವುದಿಲ್ಲ; ಸಾವು ಬಂದರೂ ಕಳವಳಪಡುವುದಿಲ್ಲ!

-ಗೊ.ರು.ಚ.







# ಹಿರಿಯ ಅರ್ಥಶಾಸ್ತ್ರಜ್ಞ ಮತ್ತು ಶಿಕ್ಷಣ ತಜ್ಞ ಲಿಂಗೈಕ್ಯ ಡಾ. ಡಿ.ಎಂ. ನಂಜುಂಡಪ್ಪನವರಿಗೆ ಶ್ರದ್ಧಾಂಜಲಿ

ಕರ್ನಾಟಕದ ಹೆಮ್ಮೆಯ ಅಂತಾರಾಷ್ಟ್ರೀಯ ಖ್ಯಾತಿಯ ಅರ್ಥಶಾಸ್ತ್ರ ತಜ್ಞರೂ ಶಿಕ್ಷಣ ತಜ್ಞರೂ ಆದ ಡಾ. ಡಿ.ಎಂ. ನಂಜುಂಡಪ್ಪನವರು ದಿನಾಂಕ ೨೬.೯.೨೦೦ರಂದು ಬೆಳಗ್ಗೆ ಲಿಂಗೈಕ್ಯರಾದರು.

ಚಿತ್ರದುರ್ಗ ಜಿಲ್ಲಾ ಹೊಳಲ್ಕೆರೆ ತಾಲ್ಲೂಕಿನ ದೊಗ್ಗನಾಳು ಗ್ರಾಮದಲ್ಲಿ ೧೯೩೦ರಲ್ಲಿ ಜನಿಸಿದ ಡಿ.ಎಂ. ನಂಜುಂಡಪ್ಪನವರ ತಂದೆ ಮಹದೇವಪ್ಪ; ತಾಯಿ ಕಾಳಮ್ಮ. ಹುಟ್ಟೂರಿನಲ್ಲೇ ಪ್ರಾಥಮಿಕ ಶಿಕ್ಷಣ ಪಡೆದು ಮೈಸೂರು ವಿಶ್ವವಿದ್ಯಾಲಯದಿಂದ ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಗಳಿಸಿ ಅಲ್ಲಿಂದಲೇ ಡಾಕ್ಟರೇಟ್ ಪಡೆದರು.

ಅಮೇರಿಕಾದ ಸ್ಟಾನ್‌ಫೋರ್ಡ್ ಸಂಶೋಧನಾ ಸಂಸ್ಥೆ, ಹಾರ್ವರ್ಡ್ ವಿಶ್ವವಿದ್ಯಾಲಯ, ಇಂಗ್ಲೆಂಡಿನ ಸಸೆಕ್ಸ್ ವಿಶ್ವವಿದ್ಯಾಲಯ ಮೊದಲಾದ ವಿಶ್ವ ಪ್ರಸಿದ್ಧ ಶಿಕ್ಷಣ ಸಂಸ್ಥೆಗಳಲ್ಲಿ ಉನ್ನತ ಅಧ್ಯಯನ ನಡೆಸಿದ ಡಾ. ಡಿ.ಎಂ. ನಂಜುಂಡಪ್ಪನವರು ಕರ್ನಾಟಕ ವಿಶ್ವವಿದ್ಯಾಲಯದ ಅರ್ಥಶಾಸ್ತ್ರ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ನಂತರ ಅದೇ ವಿಶ್ವವಿದ್ಯಾಲಯ ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳ ಕುಲಪತಿ ಸ್ಥಾನದ ಗೌರವ ಪಡೆದಿದ್ದರು.

ಕರ್ನಾಟಕದ ರಾಜ್ಯದ ಆರ್ಥಿಕ ಸಲಹೆಗಾರರಾಗಿ, ಸಾಂಸ್ಥಿಕ ಹಣಕಾಸು ಹಾಗೂ ಯೋಜನಾ ಇಲಾಖೆಯ ಕಾರ್ಯದರ್ಶಿಗಳಾಗಿ, ಅಖಿಲ ಭಾರತ ಅರ್ಥಶಾಸ್ತ್ರ ಸಮ್ಮೇಳನದ ಅಧ್ಯಕ್ಷರಾಗಿ, ಭಾರತ-ಸೋವಿಯತ್ ಒಪ್ಪಂದದ ಪ್ರಕಾರ ರಷ್ಯಾದ ೧೦ನೆಯ ವಾರ್ಷಿಕೋತ್ಸವಕ್ಕೆ ಭಾರತದ ಪ್ರತಿನಿಧಿಯಾಗಿ, ಅಮೇರಿಕಾ ಸರ್ಕಾರದ ಆಹ್ವಾನದ ಮೇಲೆ ಅಲ್ಲಿನ ಹಲವು ವಿಶ್ವವಿದ್ಯಾಲಯಗಳು, ಸಂಶೋಧನಾ ಸಂಸ್ಥೆಗಳು ಮತ್ತು ಕೈಗಾರಿಕಾ ಉದ್ಯಮಗಳಿಗೆ ಸಂದರ್ಶಕರಾಗಿ, ಕರ್ನಾಟಕ ರಾಜ್ಯಪಾಲರ ಸಲಹೆಗಾರರಾಗಿ, ಭಾರತ ಸರಕಾರದ ರೈಲ್ವೆ ಮಂತ್ರಾಲಯ ಸಮಿತಿಯೊಂದರ ಅಧ್ಯಕ್ಷರಾಗಿ, ಅಭಿವೃದ್ಧಿ ಮಂತ್ರಾಲಯದ ಸಂಶೋಧನಾ ಪರಿಷತ್ತಿನ ಅಧ್ಯಕ್ಷರಾಗಿ, ಭಾರಿ ಉದ್ದಿಮೆ ಮಂತ್ರಾಲಯದ ಬಂಡವಾಳ ಹಿಂತೆಗೆತ ಆಯೋಗದ ಸದಸ್ಯರಾಗಿ, ಯುನೆಸ್ಕೊ ವಿಚಾರ ಸಂಕಿರಣದ ಪ್ರತಿನಿಧಿಯಾಗಿ ಮತ್ತು ಇತರ ಅನೇಕ ರಾಷ್ಟ್ರ ಮತ್ತು ರಾಜ್ಯಮಟ್ಟದ ಸಮಿತಿಗಳಲ್ಲಿ ವಿವಿಧ ಸ್ಥಾನಮಾನಗಳಿಂದ ಡಾ. ಡಿ.ಎಂ. ನಂಜುಂಡಪ್ಪನವರು ಕರ್ನಾಟಕಕ್ಕೆ ಮಾತ್ರವಲ್ಲ, ಇಡೀ ಭಾರತಕ್ಕೆ ಹೆಸರು ತಂದಿದ್ದರು.

ಕರ್ನಾಟಕ ರಾಜ್ಯ ಭಾರತೀಯ ರೆಡ್ ಕ್ರಾಸ್, ರಾಮಕೃಷ್ಣ ಮಿಷನ್, ಜೆ.ಎಸ್.ಎಸ್. ಮಹಾವಿದ್ಯಾಪೀಠ ಮೊದಲಾದ ಅನೇಕ ಜನಸೇವಾ ಸಂಸ್ಥೆಗಳಿಗೆ ಡಾ. ಡಿ.ಎಂ. ನಂಜುಂಡಪ್ಪನವರಿಂದ ಅತ್ಯಂತ ಮೌಲಿಕ ಸೇವೆ ಸಂದಿದೆ. ಶಿಕ್ಷಣ ಕ್ಷೇತ್ರದಲ್ಲಿ ಅವರ ಮತ್ತೊಂದು ಮಹತ್ವದ ಸೇವೆಯೆಂದರೆ ಜೆ.ಎಸ್.ಎಸ್. ಸ್ಪರ್ಧಾತ್ಮಕ ಪರೀಕ್ಷೆಗಳ ತರಬೇತಿ ಕೇಂದ್ರದ ನಿರ್ದೇಶಕರಾಗಿ ಸಲ್ಲಿಸಿದ ಸೇವೆ.

ಡಾ. ಡಿ.ಎಂ. ನಂಜುಂಡಪ್ಪನವರ ಅದ್ವಿತೀಯ ಪ್ರತಿಭೆ ಸುದೀರ್ಘ ಸೇವಾನುಭವಗಳ ಒಂದು ಮಹತ್ವದ ದಾಖಲೆಯೆಂದರೆ, ಕರ್ನಾಟಕ ಸರ್ಕಾರಕ್ಕೆ ಪ್ರಾದೇಶಿಕ ಅಸಮತೋಲನ ನಿವಾರಣೆ ಉನ್ನತಾಧಿಕಾರ ಸಮಿತಿಯ ಅಧ್ಯಕ್ಷರಾಗಿ ಒಪ್ಪಿಸಿರುವ ಬೃಹತ್ ವರದಿ. ಅತ್ಯಂತ ವ್ಯಾಪಕ ಅಧ್ಯಯನ ನಡೆಸಿ, ಅಷ್ಟೇ ವೈಜ್ಞಾನಿಕವಾಗಿ, ಅಧಿಕೃತ ಅಂಕಿ-ಅಂಶಗಳೊಡನೆ ಸಿದ್ಧಪಡಿಸಿರುವ ಈ ವರದಿ ಬಹುಶಃ ನಮ್ಮ ರಾಷ್ಟ್ರದ ಉಳಿದೆಲ್ಲ ರಾಜ್ಯಗಳಿಗೂ ಪ್ರಾದೇಶಿಕ ಅಸಮತೆಯ ನಿವಾರಣೆ ಪ್ರಯತ್ನಕ್ಕೆ ಮಾರ್ಗದರ್ಶಿಯಾಗಿದೆ ಎಂದು ಹೇಳಬಹುದು.

ತಮ್ಮ ವಿದ್ಯಾಭ್ಯಾಸದ ಅವಧಿಯಲ್ಲಿ ಆಶ್ರಯ ನೀಡಿದ ಶ್ರೀ ಸುತ್ತೂರು ಮಠ ಮತ್ತು ಲಿಂ. ಡಾ. ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳಿಗೆ ಸದಾ ಋಣಿಯಾಗಿದ್ದ ಡಾ. ನಂಜುಂಡಪ್ಪನವರು ಶ್ರೀ ಮಠದ ಶೈಕ್ಷಣಿಕ ಅಭಿವೃದ್ಧಿ ಚಟುವಟಿಕೆಗಳಿಗಾಗಿ ಕೊನೆಯ ಉಸಿರಿನವರೆಗೂ ದುಡಿದರು.

ದಿನಾಂಕ ೨೮.೯.೨೦೦೫ರಂದು ಬೆಂಗಳೂರಿನ ಶಿವರಾತ್ರೀಶ್ವರ ಕೇಂದ್ರದಲ್ಲಿ ಸುತ್ತೂರು ಪೀಠದ ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳ ಸಾನ್ನಿಧ್ಯದಲ್ಲಿ ಲಿಂಗೈಕ್ಯ ಡಾ. ಡಿ.ಎಂ. ನಂಜುಂಡಪ್ಪ ನವರಿಗೆ ಶ್ರದ್ಧಾಂಜಲಿ ಅರ್ಪಿಸಲಾಯಿತು. ಶ್ರದ್ಧಾಂಜಲಿ ಸಭೆಯಲ್ಲಿ ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ ಧರಂಸಿಂಗ್, ಆಹಾರ ಸಚಿವರಾದ ಶ್ರೀ ಮಹದೇವ ಪ್ರಸಾದ್, ಲೋಕಸಭಾ ಸದಸ್ಯರಾದ ಶ್ರೀ ಅನಂತಕುಮಾರ್, ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಪ್ರೊ. ಚಂದ್ರಶೇಖರ ಪಾಟೀಲ, ಹಿರಿಯ ಸಂಶೋಧಕರಾದ ಡಾ. ಎಂ. ಚಿದಾನಂದಮೂರ್ತಿ, ರಾಜ್ಯ ಸರ್ಕಾರದ ನಿವೃತ್ತ ಮುಖ್ಯ ಕಾರ್ಯದರ್ಶಿ

ಶ್ರೀ ಭಟ್ಟಾಚಾರ್ಯ, ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ನಿವೃತ್ತ ಕುಲಪತಿ ಡಾ. ದ್ವಾರಕನಾಥ, ನಿವೃತ್ತ ಐ.ಎ.ಎಸ್. ಅಧಿಕಾರಿ ಶ್ರೀ ಶಿವಾನಂದ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ ಮೊದಲಾದ ಗಣ್ಯರಲ್ಲದೆ ಲಿಂ. ನಂಜುಂಡಪ್ಪ ಅವರ ಧರ್ಮಪತ್ನಿ ಶ್ರೀಮತಿ ಶಾಂತಮ್ಮ ಮತ್ತು ಅವರ ಮಕ್ಕಳು ಹಾಗೂ ಮೊಮ್ಮಕ್ಕಳೂ ಪಾಲುಗೊಂಡಿದ್ದರು.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ನಿಕಟ ಅಭಿಮಾನಿಗಳಾಗಿದ್ದ ಲಿಂ. ಡಾ. ಡಿ.ಎಂ. ನಂಜುಂಡಪ್ಪ ಅವರಿಗೆ ಪರಿಷತ್ತು ತನ್ನ ಹೃತ್ಪೂರ್ವಕ ಶ್ರದ್ಧಾಂಜಲಿ ಅರ್ಪಿಸುತ್ತದೆ.

–ಜಿ.ಪಿ. ಚಿಕ್ಕರಿಯಪ್ಪ
ಪ್ರಧಾನ ಕಾರ್ಯದರ್ಶಿ

## ಯಾಕೆ ಒಣ ದಿಮಾಕು?

ನಿನ್ನ ಮನಸು ನಿನ್ನದಲ್ಲ ಯಾಕೆ ಒಣ ದಿಮಾಕು
ನಿನ್ನ ಕಣ್ಣು ನಿನ್ನದಲ್ಲ ಯಾಕೆ ಒಣ ದಿಮಾಕು?

ಬಗೆಯಲೊಂದು ಕನಸು ಹುಟ್ಟಿ ಜೀವ ಜೀವ ಹೆಣೆವ
ಲೋಕವನ್ನು ಕಟ್ಟಲಿಲ್ಲ ಯಾಕೆ ಒಣ ದಿಮಾಕು?

ಹಸಿವಿನಿಂದ ಸೊರಗಿದೊಡಲ ಕಣ್ಣಲಡಗಿ ನಿಂತ
ಭಾಷೆಯನ್ನು ಓದಲಿಲ್ಲ ಯಾಕೆ ಒಣ ದಿಮಾಕು?

ತತ್ತ್ವ ನುಡಿವೆ ಶಾಸ್ತ್ರ ಒರೆವೆ ಜನರ ಮನದ ಮಾತ
ಒಂದು ಕ್ಷಣವು ಗ್ರಹಿಸಲಿಲ್ಲ ಯಾಕೆ ಒಣ ದಿಮಾಕು?

ಒಂದೆ ಒಂದು ಮಾತಿನಿಂದ ಜೀವ ಉಳಿಯುವಾಗ
ಬಿಗಿದ ತುಟಿಯ ಬಿಚ್ಚಲಿಲ್ಲ ಯಾಕೆ ಒಣ ದಿಮಾಕು?

ಓದಿ ಓದಿ ಪದವಿ ಪಡೆದೆ ರಾಶಿ ರಾಶಿ ಬರೆದೆ
ನಿನ್ನ ನೀನೆ ತಿಳಿಯಲಿಲ್ಲ ಯಾಕೆ ಒಣ ದಿಮಾಕು?

ಹಳ್ಳಿ ಬಿಟ್ಟು ದಿಲ್ಲಿ ಸೇರಿ ಕುರ್ಚಿ ಹಿಡಿದು ಕುಳಿತೆ
ಕುರ್ಚಿ ಬೆಲೆಯ ಪಡೆಯಲಿಲ್ಲ ಯಾಕೆ ಒಣ ದಿಮಾಕು?

ಜಾತಿ ಭಾವ ಸಲ್ಲದೆಂದು ಸ್ವಾಮಿಗಳನು ಬೈದೆ
ರಾತ್ರಿ ಕಾಲ ಹಿಡಿವೆಯಲ್ಲ ಯಾಕೆ ಒಣ ದಿಮಾಕು?

ಹುಟ್ಟು ಸಾವು ತಿಳಿಯದಿದ್ದರೇನು 'ಅರಸ' ಇರಲಿ
ಊಟವೇಕೆ ತಿಳಿಯದಲ್ಲ ಯಾಕೆ ಒಣ ದಿಮಾಕು?

–ಶಾಂತರಸ

(ಕೃಪೆ : ಗಜ಼ಲ್ ಮತ್ತು ಬಿಡಿ ದ್ವಿಪದಿ)

## ರೈಲ್ವೆ ಸಂದರ್ಶನ

ಒಮ್ಮೆ ರೈಲ್ವೆ ಇಲಾಖೆಯಲ್ಲಿ 'ಪಾಯಿಂಟ್‌ಮನ್' ಹುದ್ದೆಗೆ ಸಂದರ್ಶನ ಏರ್ಪಡಿಸಲಾಗಿತ್ತು. ಸಂದರ್ಶನಕ್ಕೆ ಬಂದಿದ್ದ ಓರ್ವ ಅಭ್ಯರ್ಥಿಗೆ ಆಯ್ಕೆ ಸಮಿತಿಯವರು ಅರ್ಹತಾ ಪರೀಕ್ಷೆಗಾಗಿ ಕೆಲವು ಪ್ರಶ್ನೆಗಳನ್ನು ಕೇಳಿದರು.

ಮೊದಲ ಪ್ರಶ್ನೆ : "ಒಂದೇ ಹಳಿ ಸಾಲಿನ ಮೇಲೆ ಪರಸ್ಪರ ವಿರುದ್ಧ ದಿಕ್ಕಿನಲ್ಲಿ ಎರಡು ರೈಲುಗಾಡಿಗಳು ಬರುತ್ತಿರುವುದನ್ನು ಕಂಡಾಗ ನೀನು ಏನು ಮಾಡುವೆ?"

ಅಭ್ಯರ್ಥಿಯ ಉತ್ತರ : "ಕೂಡಲೇ ಹಳಿ ಸಾಲುಗಳನ್ನು ಬದಲಾಯಿಸಿ ಆ ರೈಲು ಗಾಡಿಗಳು ಬೇರೆ ಬೇರೆ ಹಳಿ ಸಾಲುಗಳ ಮೇಲೆ ಹೋಗುವಂತೆ ಮಾಡುತ್ತೇನೆ."

ಎರಡನೆಯ ಪ್ರಶ್ನೆ : "ಒಂದು ವೇಳೆ ಆ ಹಳಿ ಸಾಲುಗಳನ್ನು ಸರಿಯಾಗಿ ಬದಲಾಯಿಸಲು ನಿನಗೆ ಸಾಧ್ಯವಾಗದಿದ್ದರೆ?"

ಅಭ್ಯರ್ಥಿಯ ಉತ್ತರ : "ಕೆಂಪು ದೀಪದ ಸಿಗ್ನಲ್ ತೋರಿಸುತ್ತೇನೆ"

ಮೂರನೆಯ ಪ್ರಶ್ನೆ : "ಆ ಕೆಂಪು ದೀಪ ಒಂದು ವೇಳೆ ಕೆಲಸ ಮಾಡದಿದ್ದರೆ?"

ಅಭ್ಯರ್ಥಿಯ ಉತ್ತರ : "ರೈಲು ಚಾಲಕನಿಗೆ ಕೆಂಪು ಬಾವುಟ ತೋರಿಸುತ್ತಾ ರೈಲು ಹಳಿಗಳ ಮೇಲೆ ಓಡುತ್ತೇನೆ"

ನಾಲ್ಕನೆಯ ಪ್ರಶ್ನೆ : "ಒಂದು ವೇಳೆ ರೈಲು ಚಾಲಕ ನಿನ್ನ ಕೆಂಪು ಬಾವುಟವನ್ನು ಗಮನಿಸದಿದ್ದರೆ?"

ಅಭ್ಯರ್ಥಿಯ ಉತ್ತರ : "ಆಗ ನಾನು ಸಾಧ್ಯವಾದಷ್ಟು ದೊಡ್ಡ ದನಿಯಲ್ಲಿ ಕೂಗಿ ನನ್ನ ಹೆಂಡತಿಯನ್ನು ಕರೆಯುತ್ತೇನೆ"

ಆಗ ಆಯ್ಕೆದಾರರು "ಅಂತಹ ಪರಿಸ್ಥಿತಿಯಲ್ಲಿ ನಿನ್ನ ಹೆಂಡತಿ ಏನು ಮಾಡಲು ಸಾಧ್ಯ?" ಎಂದು ಕೇಳಿದರು. ಅದಕ್ಕೆ ಅಭ್ಯರ್ಥಿ "ಅವಳ ಜೀವಮಾನದಲ್ಲೇ ಕಂಡರಿಯದಂತಹ ಅತ್ಯಂತ ಬಾರಿ ರೈಲು ಅಪಘಾತದ ಭೀಕರ ದೃಶ್ಯವನ್ನು ಅನುಭವಿಸಲು ನನ್ನ ಹೆಂಡತಿಗೆ ಹೇಳುತ್ತೇನೆ" ಎಂದನಂತೆ!





# ಶರಣ ಪರಿಕಲ್ಪನೆ

ಹೆಚ್.ಎಸ್. ಶಿವಪ್ರಕಾಶ್, ಜವಾಹರಲಾಲ್ ನೆಹರು ವಿಶ್ವವಿದ್ಯಾಲಯ

ಸಾಮಾನ್ಯವಾಗಿ ಶರಣರು ಏನು ಹೇಳಿದರು ಅದು ಸಂವಿಧಾನದಲ್ಲಿದೆ. ಈ ಧರ್ಮದಲ್ಲಿರುವುದು ಆ ಧರ್ಮದಲ್ಲಿದೆ ಎಂದು ಹೇಳುತ್ತೇವೆ. ಆದರೆ ಶರಣರ ವಿಶಿಷ್ಟವಾದ ಕೊಡುಗೆ ಏನು? 'ಶರಣ' ಅನ್ನುವ ಪದದ ಅರ್ಥವೇನು? ಶರಣರು ಸ್ವಾತಂತ್ರ್ಯಕ್ಕಾಗಿ ಹೋರಾಡಿದರು ಎನ್ನುತ್ತಾರೆ. ಆದರೆ 'ಶರಣ' ಅಂದರೆ ಸಂಪೂರ್ಣವಾಗಿ ಶರಣಾದವನು. ಮಧ್ಯಯುಗದ ಎಲ್ಲ ಭಕ್ತಿಪಂಥಗಳ ನಾಯಕರ ನೇತಾರರ ಹೆಸರುಗಳನ್ನು ನೋಡಿದಾಗ 'ಶರಣ' ಪದಕ್ಕೆ ಸಂವಾದಿಯಾದ ಪದಗಳು ನಮಗೆ ಕಾಣುತ್ತವೆ.

ತಮಿಳುನಾಡಿನ ಶಿವಭಕ್ತರು ತಮ್ಮನ್ನ 'ಶಿವತ್ತೊಂಡರ್' ಎಂದು ಕರೆದುಕೊಂಡರು. 'ತೊಂಡರ್' ಎಂದರೆ ಗುಲಾಮರು ಎಂಬುದಾಗಿ, 'ಶಿವನ ಗುಲಾಮರು' ಎಂಬುದಾಗಿ. ನಾಯನ್ಮಾರುಗಳು 'ನಾಯನ್ಮಾರ್' ಎಂದರೆ ತಮಿಳಿನಲ್ಲಿ ಮುಳುಗಿ ಹೋದವನು. ಉತ್ತರದಲ್ಲಿ ಕಬೀರದಾಸ್, ರಾಮದಾಸ್, ಅಂದರೆ ದಾಸ, ಶರಣ. ಕರ್ನಾಟಕದ ದಾಸಪರಂಪರೆಯಲ್ಲಿ ದಾಸ ಎನ್ನುವುದು ಬಹಳ ಮುಖ್ಯ. ಈ ದಾಸತ್ವ ಯಾರನ್ನು ಕುರಿತದ್ದು? ಈ ಶರಣತ್ವ ಯಾರನ್ನು ಕುರಿತದ್ದು? ತಮಿಳಿನ ಬಹಳ ದೊಡ್ಡ ವೈಷ್ಣವ ಕವಿಯಾದ ಪೆರಿಯ ಆಳ್ವಾರ್ ಶ್ರೀಕೃಷ್ಣನನ್ನು ಕುರಿತು ತಮಿಳಿನಲ್ಲಿ ಗೀತೆಯನ್ನು ಬರೆದಿದ್ದಾರೆ. ಪಲ್ಲಾಂಡು, ಪಲ್ಲಾಂಡು, ಪಲ್ಲಾಂಡು. ಆ ಕಾಲದಲ್ಲಿ ಬ್ರಾಹ್ಮಣರು ರಾಜರ ತಲೆಯ ಮೇಲೆ ಕೈಯನ್ನು ಇಟ್ಟು ಆಶೀರ್ವಾದ ಮಾಡುತ್ತಾ ಇದ್ದರು, ಸಾವಿರ ವರ್ಷ ಬಾಳು ಎಂಬುದಾಗಿ. ಆದರೆ ಇಲ್ಲಿ 'ಪೆರಿಯಾಳ್ವಾರ್' ನಾರಾಯಣನ ತಲೆಯ ಮೇಲೆ ಕೈಯನ್ನು ಇಟ್ಟು 'ಪಲ್ಲಾಂಡು, ಪಲ್ಲಾಂಡು' ಎಂದು ಹೇಳಿ, ಕೊನೆಗೆ 'ನಾನು ಈ ಧರೆಯ ಯಾವ ಚಕ್ರವರ್ತಿಯನ್ನೂ ಹರಸುವುದಿಲ್ಲ, ತ್ರಿಲೋಕದ ಚಕ್ರವರ್ತಿಯಾದ ನಾರಾಯಣನನ್ನು ಮಾತ್ರ ಹರಸುತ್ತೇನೆ" ಎಂದಿದ್ದಾರೆ. ಇದು ಶರಣ ಮತ್ತು ದಾಸ ಪದದ ಅರ್ಥ. ಇದನ್ನೇ ದೇವರ ದಾಸಿಮಯ್ಯ ಹೇಳಿದ್ದಾನೆ :

*'ಇಳೆ ನಿಮ್ಮದಾನ, ಬೆಳೆ ನಿಮ್ಮದಾನ*
*ಸುಳಿದು ಬೀಸುವ ಗಾಳಿ ನಿಮ್ಮ ದಾನ*
*ನಿಮ್ಮ ದಾನವನುಂಡು ಅನ್ಯರನು ಪೊಗಳುವ*
*ಕುನ್ನಿಗಳನೇನೆಂಬೆ ರಾಮನಾಥ'*

'ಕುನ್ನಿ' ಎಂಬ ಪದವನ್ನು ನೋಡಿ. ಯಾರು ಈ ಕುನ್ನಿಗಳು'? ಆಸ್ಥಾನ ಕವಿಗಳು ರಾಜರನ್ನು, ಒಂದು ಮೂರು ತುಂಡು ಹಳ್ಳಿಗಳನ್ನು ಆಳುತ್ತಿದ್ದ ಆ ರಾಜನನ್ನು 'ತ್ರಿಭುವನ ಚಕ್ರವರ್ತಿ' ಎಂದು ಕೀರ್ತಿಸುತ್ತಿದ್ದ ಆ ಕಾಲದ ರಾಜರುಗಳು. ಆದರೆ ಶರಣರ ಪಥ ಪ್ರತಿಭಟನೆಯ ಪಥ, ಹೋರಾಟದ ಪಥ; ಸರಳ ಸಮನ್ವಯದ ಪಥವಲ್ಲ. ಬಸವಣ್ಣನವರ ವಚನದಲ್ಲಿ ಇದು ಸ್ಪಷ್ಟವಾಗಿದೆ:

*"ಜಂಬೂ ದ್ವೀಪ ನವಖಂಡ ಪೃಥ್ವಿಯೊಳಗೆ*
*ಎರಡಾಳಿನ ಭಾಷೆ, ಕೊಲುವೆನೆಂಬ ಭಾಷೆ ದೇವನದು,*
*ಗೆಲುವೆನೆಂಬ ಭಾಷೆ ಭಕ್ತನದು. ಭಕ್ತಿಯೆಂಬ*
*ಕೂರಲುಗನೆ ಹಿಡಿದು ಸದ್ಭಕ್ತರು ಗೆದ್ದರು ಕಾಣಾ,*
*ಕೂಡಲಸಂಗಮದೇವಾ"*

ಭಕ್ತಿ ಎನ್ನುವುದು ಕತ್ತಿ, ಕೂರಲಗು, ತೀಕ್ಷ್ಣವಾದ ಕತ್ತಿ, ಇದು ಹೋರಾಟದ ಹಾದಿ. ಆದ್ದರಿಂದ ಸ್ವಾತಂತ್ರ್ಯವನ್ನು ಪಡೆಯಬೇಕಾದರೆ, ಸಮಾನತೆಯನ್ನು ಪಡೆದುಕೊಳ್ಳಬೇಕಾದರೆ ಸಮನ್ವಯ ಸೂತ್ರದಿಂದ ಆಗುವುದಿಲ್ಲ. ಈ ಸಮನ್ವಯ ಸೂತ್ರವನ್ನು ನೂರಾರು ವರ್ಷದಿಂದ, ಸಾವಿರಾರು ವರ್ಷದಿಂದ ಹೇಳಿಕೊಂಡು ಬರುತ್ತಿದ್ದರು. 'ವಸುದೈವ ಕುಟುಂಬಂ' ಇತ್ಯಾದಿ ಇತ್ಯಾದಿಯಾಗಿ. ಆದರೆ ಇದನ್ನು ವಾಸ್ತವದಲ್ಲಿ ಯಾವ ರೀತಿ ಆಚರಣೆಗೆ ತರಬೇಕು? ಅದೇ ಶರಣರು ಅನುಸರಿಸಿದ, ಆಚರಿಸಿದ ಮತ್ತು ಪ್ರಚಾರ ಮಾಡಿದ ಪಥ. ಅದರ ಆಂತರ್ಯವನ್ನು, ವಿಶಿಷ್ಟತೆಯನ್ನು ನಾವು ತಿಳಿದುಕೊಳ್ಳಬೇಕು. ಇದನ್ನು ನೋಡಿದಾಗ ಮುಖ್ಯವಾಗಿ ನಮಗೆ ಅನ್ನಿಸುವುದು ಏನೆಂದರೆ, ನನಗೆ ಒಂದು ಕಥೆ ಜ್ಞಾಪಕಕ್ಕೆ ಬರುತ್ತದೆ. ಅದು ಚೀನಿಕತೆ : ಒಂದು ಸಲ ಚೀನಾದಲ್ಲಿ ಇಬ್ಬರು ಮಹಾನ್ ತತ್ವಜ್ಞಾನಿಗಳು ಇದ್ದರು. 'ಕನ್‌ಫ್ಯೂಷಿಯಸ್' ಮತ್ತು ಇನ್ನೊಬ್ಬ 'ಲಾವ್ರೋತ್ಸೆ'. ಕನ್‌ಫ್ಯೂಷಿಯಸ್ ಹೇಳುತ್ತಿದ್ದ : 'ಒಂದು ಆದರ್ಶ ರಾಜ್ಯ ಅನ್ನುವಲ್ಲಿ ಆದರ್ಶ ವ್ಯವಸ್ಥೆ ಅನ್ನುವುದು ಹೊರಪ್ರಪಂಚದಲ್ಲಿ ಇರಲು ಸಾಧ್ಯವಿಲ್ಲ, ಇದು ಅಂತರಂಗದಲ್ಲಿ ಇರುವುದಕ್ಕೆ ಮಾತ್ರ ಸಾಧ್ಯ"ವೆಂದು. ಆದರೆ ಲಾವ್ರೋತ್ಸೆ ಹೇಳುತ್ತಿದ್ದ– "ಹೊರ ಪ್ರಪಂಚದಲ್ಲಿ ನಾವು ಒಂದು ಆದರ್ಶ ರಾಜ್ಯವನ್ನು ಸ್ಥಾಪಿಸಬೇಕು" ಎಂದು.

ಚಿಕ್ಕ ವಯಸ್ಸಿನಲ್ಲಿ ಕನ್‌ಫ್ಯೂಷಿಯಸ್ ಒಂದು ಸಲ ಎಲ್ಲಿಗೋ ಒಂದು ಕಡೆ ಯಾತ್ರೆ ಹೊರಟಿದ್ದನಂತೆ. ಆಗ ಲಾವ್ರೋತ್ಸೆ ಕೇಳಿದ : "ಅಪ್ಪ ಎಲ್ಲಿಗೆ ಹೋಗ್ತಾ ಇದ್ದೀಯೆ?" ಆಗ ಕನ್‌ಫ್ಯೂಷಿಯಸ್ : "ನಾನು ಒಬ್ಬ ಆದರ್ಶ ರಾಜನನ್ನು ಹುಡುಕಿಕೊಂಡು ಹೊರಟಿದ್ದೇನೆ"

ಎಂದು ಹೇಳಿದ. "ಅವನು ಸಿಕ್ಕುವುದಿಲ್ಲ, ನೀನು ಹೋಗಬೇಡ" ಎಂದು ಲಾವ್ರೋತ್ಸೆ ಹೇಳಿದ. "ಇಲ್ಲ ಸಿಕ್ಕುತ್ತಾನೆ, ನನಗೆ ಗೊತ್ತು ಎನ್ನುತ್ತಾನೆ" ಕನ್‌ಪ್ಯೂಷಿಯಸ್. ಎಂಬತ್ತು ವರ್ಷವಾದವು. ಆಗ ಲಾವ್ರೋತ್ಸೆ ಕೂಡ ಮುದುಕ. ಕನ್‌ಪ್ಯೂಷಿಯಸ್ ಕೂಡ ಮುದುಕ. ಇವನು ಪುನಃ ಯಾತ್ರೆ ಹೋಗಲು ಹೊರಟಿದ್ದಾನೆ. "ಎಲ್ಲಿಗೆ ಹೊರಟಿದ್ದೀಯೆ?" ಎಂದು ಲಾವ್ರೋತ್ಸೆ ಪುನಃ ಕೇಳುತ್ತಾನೆ. ಆಗ ಕನ್‌ಪ್ಯೂಷಿಯಸ್ ಹೇಳಿದ, "ಆದರ್ಶ ರಾಜನನ್ನು ನಾನು ಇನ್ನೂ ಹುಡುಕುತ್ತಾ ಇದ್ದೇನೆ" ಎಂದು. ಪುನಃ ಲಾವ್ರೋತ್ಸೆ ಹೇಳಿದ : "ಇಲ್ಲಪ್ಪ ಆದರ್ಶರಾಜ ನಿನಗೆ ಎಲ್ಲಿಯೂ ಸಿಕ್ಕುವುದಿಲ್ಲ. ಆದರ್ಶ ವ್ಯವಸ್ಥೆ ನಮ್ಮ ಅಂತರಂಗದಲ್ಲಿದೆ, ಅಲ್ಲಿ ಹುಡುಕು" ಎಂದನು.

ಪ್ರಜಾಪ್ರಭುತ್ವ ಒಂದು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವ್ಯವಸ್ಥೆ. ಈ ವ್ಯವಸ್ಥೆಯನ್ನು ಹೊರಗಡೆ ಸ್ಥಾಪನೆ ಮಾಡಬೇಕಾ? ಅಥವಾ ಒಳಗಡೆ ಸ್ಥಾಪನೆ ಮಾಡಬೇಕಾ?

ಹಿಂದೂಸ್ಥಾನದಲ್ಲಿ 'ಆಂತರಿಕ ಸಮಾಧಿ' ಎಂದು ಹೇಳಿದ ಧರ್ಮಗಳು ಲೆಕ್ಕವಿಲ್ಲದಷ್ಟು. ವೇದಾಂತದಲ್ಲಿ ಅದನ್ನೇ ಹೇಳಿದರು. ಎಲ್ಲದರಲ್ಲಿಯೂ ಅದನ್ನೇ ಹೇಳಿದರು. ಆದರೆ ಆಂತರಿಕವಾಗಿ ಸಮಾನತೆಯನ್ನು ನಾವು ನಂಬಿದ ಮಾತ್ರಕ್ಕೆ ಹೊರಪ್ರಪಂಚದಲ್ಲಿ ಸಮಾನತೆ ಬರುವುದಿಲ್ಲ. ಇದಕ್ಕೆ ಬದಲಾವಣೆಗಳಾಗಬೇಕು. ಈ ಬದಲಾವಣೆಗಳು ಸುಲಭದಲ್ಲಿ ಆಗುವುದಿಲ್ಲ. ಇದಕ್ಕೆ ಹೋರಾಟ ಬೇಕು. ಕೂರಲಗಿನ ಪಥ ಅದು. ಇದನ್ನು ಶರಣರು ತೋರಿಸಿಕೊಟ್ಟಿದ್ದಾರೆ. ಈ ಅಂಶವನ್ನು ನಾನು ಒತ್ತಿ ಹೇಳುತ್ತಿದ್ದೇನೆ. ಶರಣರ 'ಸ್ಥಾವರ' ಮತ್ತು 'ಜಂಗಮ' ಕಲ್ಪನೆಯನ್ನು ತಾತ್ವಿಕ ಅರ್ಥದಲ್ಲಿ ಹಲವು ನಿಟ್ಟಿನಿಂದ ವಿಶ್ಲೇಷಿಸಲಾಗಿದೆ. ಆದರೆ ಇದರ ಭೌತಿಕ ಅರ್ಥಕ್ಕೆ ನಾನು ಒತ್ತು ಕೊಡುವುದಕ್ಕೆ ಇಷ್ಟಪಡುತ್ತೇನೆ. ಸ್ಥಾವರ ಎಂದರೇನು? ಜಂಗಮ ಎಂದರೆ ಏನು? 'ಸ್ಥಾವರ' ಎನ್ನುವುದನ್ನು ಹಿಂದೆ ಬಹಳ ಸ್ಪಷ್ಟವಾಗಿ ನಿರ್ವಚನವನ್ನು ಮಾಡಿದವರು ಹಾನಗಲ್ಲ ಶ್ರೀ ಕುಮಾರಸ್ವಾಮಿಗಳು. ಅವರು ಹೇಳುತ್ತಾರೆ : ನಮ್ಮ ಯುಗದಲ್ಲಿ 'ಬಂಡವಾಳ' ಸ್ಥಾವರ, 'ದುಡಿಮೆ' ಜಂಗಮ, Labour ಎನ್ನುವುದು ಜಂಗಮ. ಯಾವುದು ಕ್ಯಾಪಿಟಲ್ ಎಂದರೆ, ಇದು ಬಂಡವಾಳಗಾರನ ಅಪ್ಪನ ಮನೆಯುದಲ್ಲ ಅಥವಾ ತಾತನ ಮನೆಯುದಲ್ಲ. 'ಕಾರ್ಲ್‌ಮಾರ್ಕ್ಸ್' ಹೇಳಿದ ಹಾಗೆ "This is the frozen Labour". ಇದನ್ನು ಕದ್ದಿದ್ದಾನೆ ಬಂಡವಾಳಗಾರ. ಈ ರೀತಿ ಭೌತಿಕ ಸ್ಥಾವರ ಮತ್ತು ಆಧ್ಯಾತ್ಮಿಕ ಸ್ಥಾವರಗಳಿವೆ. ಈ ಆಧ್ಯಾತ್ಮಿಕ ಸ್ಥಾವರ ಎಲ್ಲಿತ್ತು? ಯಾಕೆಂದರೆ, ಸಮಾಜವಾದ ಇಲ್ಲದೆ ಪ್ರಜಾಪ್ರಭುತ್ವ ಸ್ಥಾಪನೆ ಆಗಲು ಸಾಧ್ಯವಿಲ್ಲ. ಈವತ್ತು ಪ್ರಜಾಪ್ರಭುತ್ವದ ಬಗ್ಗೆ ಟೀಕೆಗಳು ಬರಲು ಕಾರಣವೇನೆಂದರೆ, ನಮ್ಮಲ್ಲಿ ಪ್ರಜಾಪ್ರಭುತ್ವದ ಒಂದು ರೂಪವಿದೆಯೇ ವಿನಃ ಪ್ರಜಾಪ್ರಭುತ್ವದ ಸಾರವಿಲ್ಲ. "It is democracy only in form but not in Content". ಈ ಪ್ರಜಾಪ್ರಭುತ್ವದಲ್ಲಿ ಪ್ರಜಾಪ್ರಭುತ್ವದ ನಿಜವಾದ ಅರ್ಥ ಅಸ್ತಿತ್ವಕ್ಕೆ ಬರಬೇಕು ಎಂದರೆ, ಸಮಾಜವಾದ, ಸಮಾನತೆ, ಇವುಗಳ ಒಂದು ಭೌತಿಕ ವ್ಯವಸ್ಥೆ ನಿರ್ಮಾಣವಾಗಬೇಕು.

ಮುಖ್ಯವಾಗಿ ಶರಣರು ಈ ನಿಟ್ಟಿನಲ್ಲಿ ಮಾಡಿದ ಚಿಂತನೆ ಮತ್ತು ಮಾಡಿದ ಕ್ರಿಯೆ ಏನು ಎಂಬುದು ಮುಖ್ಯ. ಈ ಆಧ್ಯಾತ್ಮಿಕ ಮತ್ತು ಭೌತಿಕ ಬಂಡವಾಳ ಎಲ್ಲಿದೆ ಎಂದರೆ ಇದು ಧರ್ಮ ಶಾಸ್ತ್ರಗಳಲ್ಲಿದೆ, ಧರ್ಮಗ್ರಂಥಗಳಲ್ಲಿದೆ. 'ವಚನ'ದ ಒಂದು ಮುಖ್ಯವಾದ ಅರ್ಥ 'ಭಾಷೆ' ಕೊಡುವುದು. ನುಡಿದಂತೆ ನಡೆ ಮತ್ತು ನಡೆದಂತೆ ನುಡಿ. ಈ ನುಡಿ ಮತ್ತು ನಡೆಯ ಸಂಬಂಧ ಯಾವಾಗ ಕಡಿದು ಹೋಗುತ್ತದೆಯೋ ಆಗ ಅದು ಆಷಾಢಭೂತಿತನವಾಗುತ್ತದೆ. ಹೀಗಾಗಿ, ಎಲ್ಲ ಧರ್ಮ ಗ್ರಂಥಗಳೂ ಕೂಡ ನಡೆಯಲ್ಲಿ ಅದು ಬಾರದೆ ಇದ್ದುದರಿಂದ ಇವೆಲ್ಲವೂ ಆಷಾಢಭೂತಿತನದ ವಿವಿಧ ಅಭಿವ್ಯಕ್ತಿಗಳಾಗಿವೆ. ಅದಕ್ಕಾಗಿ ಅವನ್ನೂ ವಿರೋಧಿಸಲಾಗಿದೆ. ಇದು ಆಧ್ಯಾತ್ಮಿಕ ಬಂಡವಾಳ ಮತ್ತು ಈ ಆಧ್ಯಾತ್ಮಿಕ ಬಂಡವಾಳವನ್ನು ಪೋಷಿಸುವ ಒಂದು ಸಾಮಾಜಿಕ ವ್ಯವಸ್ಥೆ, ಪುರೋಹಿತಶಾಹಿ ಒಂದು ಕಡೆ ೧೨ನೇ ಶತಮಾನದಲ್ಲಿ; ಇನ್ನೊಂದು ಕಡೆ ಕ್ಷತ್ರಿಯ ಪ್ರಧಾನವಾದ ರಾಜವ್ಯವಸ್ಥೆ, ಇನ್ನೊಂದು ವರ್ತಕ ಪ್ರಧಾನವಾದ ಆರ್ಥಿಕ ವ್ಯವಸ್ಥೆ. ಆಮೇಲೆ ಈ ಶರಣ ಚಳುವಳಿ ಎಲ್ಲಿಂದ ಆರಂಭವಾಯಿತು? ಯಾರು ಇದಕ್ಕೆ ನಾಯಕತ್ವವನ್ನು ಕೊಟ್ಟದ್ದು? ನಿಸ್ಸಂಶಯವಾಗಿ ಬಸವಣ್ಣನವರ ಕರ್ತಾರಶಕ್ತಿ ಇಲ್ಲದಿದ್ದರೆ ಶರಣ ಚಳುವಳಿಗೆ, ವಚನ ಚಳುವಳಿಗೆ ಅಂತಹ ವ್ಯಾಪ್ತಿ ಬರುತ್ತಿರಲಿಲ್ಲ.

ವಚನಗಳು ಯಾವ ವರ್ಗದಿಂದ ಬಂದವೆಂದು ನೋಡಿದರೆ ಬಹುತೇಕ ವಚನಕಾರರು ಆ ಕಾಲದ 'ಕರಕುಶಲ' ವರ್ಗದಿಂದ ಬಂದವರು. ಇದು ಒಂದು ಕರಕುಶಲ ವರ್ಗದ ಒಂದು ಚಳುವಳಿ. ೧೨ನೇ ಶತಮಾನದ ಶಾಸನಗಳಲ್ಲಿ ಈ ಕರಕುಶಲ ವರ್ಗದವರನ್ನು 'ಆಯಗಾರರು' ಎಂದು ಕರೆಯುತ್ತಿದ್ದರು. ಆದ್ದರಿಂದ ಇದು ಆಯಗಾರರ ಹೋರಾಟ. ಇದಕ್ಕೆ ಒಂದು ವ್ಯಾಪಕ ಸ್ವರೂಪವನ್ನು ಬಸವಣ್ಣನವರು ಕೊಟ್ಟರು.

ಈ ಕ್ಷತ್ರಿಯ ಪ್ರಧಾನವಾದ ರಾಜಕೀಯ ವ್ಯವಸ್ಥೆಯ ಮಧ್ಯಯುಗದ ಹಿಂದೂ ಸಮಾಜವನ್ನು ಕುರಿತು ಅಂಬೇಡ್ಕರ್ ಅವರು ಒಂದು ಮಾತನ್ನು ಹೇಳಿದರು–"Brahmin Bania Combine" ಎಂಬುದಾಗಿ. ಆದರೆ ನನಗೆ ಅನ್ನಿಸುವುದು ಅದು "Brahmin-







Baniya-Kshathriya Combine". ಈ ಮೂರೂ ವರ್ಗಗಳನ್ನು ಶರಣರು ವಿರೋಧಿಸಿದರು. ಹೀಗೆ ವಿರೋಧಿಸಬೇಕಾದರೆ ಒಂದು ಬದಲಿ ವ್ಯವಸ್ಥೆಯನ್ನು ಅವರು ಕಟ್ಟುವುದಕ್ಕಾಗಿ, ಬದಲಿ ಪರಿಕಲ್ಪನೆಗಳನ್ನು ಕೊಟ್ಟರು. ಎಲ್ಲವನ್ನೂ ಆಚರಣೆಗೆ ತಂದರು. ಮಧ್ಯಯುಗದ ಈ ಸ್ಥಾವರಗಳನ್ನು ಪೋಷಿಸುತ್ತಿದ್ದ ಆರ್ಥಿಕ ವ್ಯವಸ್ಥೆ ವರ್ಣಾಶ್ರಮ ಆಧಾರಿತವಾದುದು. ಈ ವರ್ಣಾಶ್ರಮ ವ್ಯವಸ್ಥೆಗೆ, ಶರಣರು ಜಾರಿಗೆ ತಂದ ಈ ಪ್ರತಿಲೋಮದ ಸವಾಲೇನಿದೆ, ಇದು ಮಧ್ಯಯುಗದ ಪ್ರಭುತ್ವವನ್ನು ಅಡಿಮೇಲು ಮಾಡುವಂಥಾದ್ದಾಗಿತ್ತು. ಅದಕ್ಕೋಸ್ಕರ ಅವರು ಹೋರಾಡಬೇಕಾಯಿತು. ಹಿಂಸೆಯನ್ನು ಎದುರಿಸಬೇಕಾಯಿತು. ಕೊನೆಯಲ್ಲಿ ಕಲ್ಯಾಣದ ಕ್ರಾಂತಿ ರಕ್ತದಲ್ಲಿ ಅದ್ದಿಹೋಗಬೇಕಾಯಿತು. ಆದ್ದರಿಂದ ಪ್ರಜಾಪ್ರಭುತ್ವವನ್ನು ಗಳಿಸಿಕೊಳ್ಳಬೇಕು ಎಂದರೆ ಹೋರಾಟ ಬೇಕು. ಹೋರಾಟದ ಹಾದಿಯನ್ನು ಶರಣರು ತಮ್ಮ ನುಡಿಯಲ್ಲಿ ಮತ್ತು ನಡೆಯಲ್ಲಿ ತಂದುಕೊಟ್ಟರು. ಮತ್ತು ಈ ಸಮಾನತೆಯ ಮೌಲ್ಯವನ್ನು ಆಧ್ಯಾತ್ಮಿಕ ಕಲ್ಪನೆಯಲ್ಲಿ ತಂದರು. ಉದಾಹರಣೆಗೆ : ಒಂದು ಗುಲಾಮ ಸಮಾಜದಲ್ಲಿ ಒಬ್ಬ ವ್ಯಕ್ತಿ ದೇವರನ್ನು ಪ್ರಭುವನ್ನಾಗಿಯೂ, ತನ್ನನ್ನು ಗುಲಾಮನನ್ನಾಗಿಯೂ ನೋಡುತ್ತಾನೆ. ಆದರೆ ಯಾರು ಗುಲಾಮ ವ್ಯವಸ್ಥೆಯನ್ನು ನಿರಾಕರಿಸುತ್ತಾನೋ ಅವನು ದೇವಮಾನವರ ಸಂಬಂಧವನ್ನು ಈ ರೀತಿ ನೋಡುವುದಿಲ್ಲ. ಇಲ್ಲಿ ಮಾದಾರ ಧೂಳಯ್ಯನ ಒಂದು ವಚನ ಜ್ಞಾಪಕಕ್ಕೆ ಬರುತ್ತದೆ :

> *"ಆಟ್ಟೆಯ ಚುಚ್ಚುವ ಉಳಿಯ ಮೊನೆಯಲ್ಲಿ ಪ್ರತ್ಯಕ್ಷನಾದ*
> *ಪರಮೇಶ್ವರನ ಕಂಡು*
> *ಇತ್ತಲೇಕಯ್ಯಾ, ಕಾಯದ ತಿತ್ತಿಯ ಹೊತ್ತಾಡುವನ*
> *ಮುಂದೆ? ನಿನ್ನ ಬೆಳ್ಳಿಯ ಬೆಟ್ಟಕ್ಕೆ ಹೋಗು, ನಿನ್ನ ಭಕ್ತರಿಪ್ಪ*
> *ಠಾವಿಂಗೆ ಹೋಗು, ಕಾಮ ಧೂಮ ಧೂಳೇಶ್ವರನ ಕರುಣದಿಂದ*
> *ಬದುಕು!*

ಇಲ್ಲಿ ದೇವರು ಕೊಡುವವನು. ಭಕ್ತ ಸ್ವೀಕರಿಸುವವನು. ಯಾವ ರೀತಿ ಒಂದು ಗುಲಾಮ ವ್ಯವಸ್ಥೆಯಲ್ಲಿ ಪ್ರಭು ಕೊಡುತ್ತಾನೆ, ಗುಲಾಮ ಕೈವೊಡ್ಡಿ ತೆಗೆದುಕೊಳ್ಳುತ್ತಾನೆ. ಭಿಕ್ಷೆ ಬೇಡುವವನಿಗೆ ಕೊಡಲು ಬರುವುದಿಲ್ಲ. ಇದನ್ನು ರನ್ನ ಗದಾಯುದ್ಧ ಕಾವ್ಯದಲ್ಲಿ ಹೇಳುತ್ತಾನೆ : "ಪಾರ್ವರ್ ಧೋ ಎನ್ನದೆ ಎನ್ನಲೇಂ–ಬಲ್ಲರಲ್ಲದೆ ಕೊಡಲ್ ಬಲ್ಲರೇ?" ಈ ಬ್ರಾಹ್ಮಣರಿಗೆ ಭಿಕ್ಷೆ ಬೇಡುವುದಕ್ಕೆ ಬರುತ್ತದಲ್ಲದೆ ಕೊಡುವುದಕ್ಕೆ ಬರುವುದೇ ಇವರಿಗೆ? ಆದ್ದರಿಂದ ಇಲ್ಲಿ ದೇವ ಕೊಡುವವನಲ್ಲ. ಭಕ್ತ ಸ್ವೀಕರಿಸುವವನಲ್ಲ. ಇಲ್ಲಿ ಮಾದಾರ ಧೂಳಯ್ಯ ಹೇಳುತ್ತಾನೆ: 'ಹೋಗು ನಾನು ಕಾಯಕದಲ್ಲಿ ತೊಡಗಿದ್ದೇನೆ. ನನ್ನ ಕಾಯಕಕ್ಕೆ ಧಕ್ಕೆ ತರಬೇಡ. ನಿನ್ನ ಬೆಳ್ಳಿಯ ಬೆಟ್ಟಕ್ಕೆ ಹೋಗು, ಕಾಮಧೂಮ ಧೂಳೇಶ್ವರನ, ಯಾರು ಕಾಮವನ್ನು ಧೂಳು ಮಾಡಿದ್ದಾನೆ, ಧೂಮ ಮಾಡಿದ್ದಾನೆ ಆ ದೇವರ ಆಶೀರ್ವಾದದಿಂದ ನೀನು ಬದುಕು ಹೋಗು' ಎಂದು ಹೇಳುತ್ತಿದ್ದಾನೆ. ಅಲ್ಲಮಪ್ರಭು ಹೆಳುತ್ತಾನೆ: 'ನಾ ದೇವನಲ್ಲದೆ ನೀ ದೇವನೇ?' ಈ ರೀತಿ ಒಂದು ರೀತಿಯ ದೇವಮಾನವ ಸಂಬಂಧವನ್ನು ಅಡಿಮೇಲು ಮಾಡಿದ್ದಾರೆ ಶರಣರು. ಆದುದರಿಂದ ಆಧ್ಯಾತ್ಮಿಕ ಸ್ವಾತಂತ್ರ್ಯ ಮತ್ತು ಭೌತಿಕ ಸ್ವಾತಂತ್ರ್ಯ ಇವೆರಡರ ಬುನಾದಿಯ ಬಗ್ಗೆ ಶರಣರು ಬಹಳ ತೀವ್ರವಾದ ಒಂದು ಮರು ವಿಮರ್ಶೆಯನ್ನು ಮಾಡಿದರು. ಆ ರೀತಿಯ ಚಿಂತನೆಗಳನ್ನು ಆಚರಣೆಗಳನ್ನು ಜಾರಿಗೆ ತಂದರು. ಯಾಕೆ ಅಂದರೆ ಇಂದಿನ ಜಗತ್ತಿನಲ್ಲಿ ನಾವು ನೋಡಿದಾಗ ಹೊರಗಿನಿಂದ ಒಂದು ವ್ಯವಸ್ಥೆಯನ್ನು, ಆದರ್ಶ ವ್ಯವಸ್ಥೆಯನ್ನು ತರುವ ಸಿದ್ಧಾಂತಗಳೂ ಸಹ ಈಗ ಮುರಿದು ಬಿದ್ದಿವೆ. ೧೯೯೦ರಲ್ಲಿ ಮೆಕ್ಸಿಕೋದಲ್ಲಿ ನಡೆದ ಒಂದು ಸಮ್ಮೇಳನದಲ್ಲಿ ಮೆಕ್ಸಿಕೋದ ಒಬ್ಬ ದೊಡ್ಡ ಚಿಂತಕ ಹಾಗೂ ನೊಬೆಲ್ ಪ್ರಶಸ್ತಿ ಪುರಸ್ಕಾರ ಪಡೆದ ಕವಿ ಆಕ್ಟೇವಿಯಾಪಸ್ ಹೇಳಿದ : "ನಮಗೆ ಏನಾಗಿದೆ ಅಂದರೆ Democracy has brought nothing but anarchy" (ಪ್ರಜಾಪ್ರಭುತ್ವ ಅರಾಜಕತೆಯನ್ನು ಬಿಟ್ಟು ನಮಗೆ ಇನ್ನೇನನ್ನೂ ಕೊಟ್ಟಿಲ್ಲ), Fascism has brought nothing but terror. (ಫ್ಯಾಸಿಸ್ಟ್‌ವಾದ ನಮಗೆ ಭಯೋತ್ಪಾದನೆಯನ್ನು ಬಿಟ್ಟು ಇನ್ನೇನೂ ಕೊಟ್ಟಿಲ್ಲ), Communism has brought nothing but dictatorship. (ಕಮ್ಯೂನಿಸ್ಟ್‌ವಾದ ನಮಗೆ ಸರ್ವಾಧಿಕಾರತ್ವವನ್ನು ಬಿಟ್ಟು ಏನನ್ನೂ ಕೊಟ್ಟಿಲ್ಲ).

ಆದ್ದರಿಂದ ನಾವು ಬೇರೆ ರೀತಿಯಾಗಿ ಜಗತ್ತನ್ನು ವ್ಯವಸ್ಥೆಗೊಳಿಸುವ ಮಾರ್ಗಗಳನ್ನೂ ಕಂಡುಕೊಳ್ಳಬೇಕಾಗಿದೆ. ಹೊರಗಿನಿಂದ ವ್ಯವಸ್ಥೆಗಳನ್ನು ತರುವ ಎಲ್ಲ ಸಿದ್ಧಾಂತಗಳೂ ಮುರಿದುಬಿದ್ದಿವೆ. ಉದಾಹರಣೆಗೆ ಈ ಭಾರತದಲ್ಲಿ ಪ್ರಜಾಸತ್ತಾತ್ಮಕವಾದ ನಡತೆ ಇಲ್ಲ. ಚಿಂತನೆಯಲ್ಲಿ ಇದೆ, ನುಡಿಯಲ್ಲಿ ಇದೆ. ಆದರೆ ನಡತೆಯಲ್ಲಿ ಇಲ್ಲ. ಇನ್ನೂ ಕೆಲವು ಆಧ್ಯಾತ್ಮಿಕ ಪಂಥಗಳವರು ಅಂತರಂಗದ ಬದಲಾವಣೆಯಿಂದ, ಮಹಾತ್ಮಾಗಾಂಧಿಯವರನ್ನೂ ಸೇರಿಸಿ, ಏನನ್ನು ನಂಬಿದರು ಅಂದರೆ ಬಂಡವಾಳ ಶಾಹಿಗಳು ಕಸ್ಟೋಡಿಯನ್ ಆದರೆ, ಆ ಪದ್ಧತಿಯ ಎಲ್ಲಾ ದೋಷಗಳೂ ನಿವಾರಣೆ ಆಗುತ್ತವೆ ಎಂಬುದಾಗಿ. ಆದರೆ ಮಾವ್ರೋತ್ಸೆತುಂಗ್ ಹೇಳಿದ ಹಾಗೆ ಒಂದು ಸಾವಿರ ಜನ ಬುದ್ಧರು ಬಂದರೂ ಕೂಡ ಬಂಡವಾಳಶಾಹಿ ಹೃದಯವನ್ನು ಬದಲಾಯಿಸಲು ಸಾಧ್ಯವಿಲ್ಲ. ಇದಕ್ಕೆ ಹೋರಾಟ ಬೇಕೇ ಬೇಕು. ಆದರೆ ಶರಣರು ಸಮಾನತೆಯನ್ನು ತರುವುದಕ್ಕೆ ಆ ಭಕ್ತಿಯೆಂಬ ಕೂರಲಗನ್ನು ಹಿಡಿದು ಭೌತಿಕ ಪ್ರಪಂಚದಲ್ಲಿ ಮತ್ತು ಆಧ್ಯಾತ್ಮಿಕ ಪ್ರಪಂಚದಲ್ಲಿ ಹೋರಾಟವನ್ನು ಮಾಡಿದರು. ಅದು ಒಳಹೊರಗಿನ ಒಂದು ಆದರ್ಶ ವ್ಯವಸ್ಥೆಯನ್ನು ತರುವ ಒಂದು



ಪ್ರಯತ್ನವಾಗಿತ್ತು. ಅಂದರೆ ಯಾವುದನ್ನು ಶರಣರು 'ಮಹಾಲಿಂಗ' ಎಂಬುದಾಗಿ ಕರೆಯುತ್ತಾರೆ, ಅಲ್ಲಮಪ್ರಭು 'ಗುಹೇಶ್ವರ' ಎಂದು ಕರೆಯುತ್ತಾರೆ, ಅದು ಒಳಹೊರಗು ಎಲ್ಲೆಲ್ಲಿಯೂ ವ್ಯಾಪಿಸಿರುವಂತಹದು. ಆದ್ದರಿಂದ ಒಳಗಿನ ಸಮಾನತೆಯೂ ಬೇಕು. ಹೊರಗಿನ ಸಮಾನತೆಯೂ ಬೇಕು. ಇದನ್ನು ಬಿಟ್ಟು ನಾವು ಕೇವಲ ಉಪನಿಷತ್ ವಾಕ್ಯಗಳನ್ನು ಅಥವಾ ವಚನಕಾರರ ಉಕ್ತಿಗಳನ್ನೇ ವೈಭವೀಕರಿಸುತ್ತಾ ಕುಳಿತರೆ ಆಗದು. ಇಂದಿನ ಸಮಸ್ಯೆಗಳ ಸಂದರ್ಭದಲ್ಲಿ ನಾವು ವಚನಗಳನ್ನು ಅರ್ಥಮಾಡಿಕೊಳ್ಳಬೇಕು. ಅಂದರೆ ಗತದ ಕ್ರಾಂತಿಯನ್ನು ವೈಭವೀಕರಿಸುವುದೂ ಕೂಡ ಒಂದು ಅಸಮಾನ ವ್ಯವಸ್ಥೆಯ ಒಂದು ಗುಣ. ಆದ್ದರಿಂದ ಆಚರಣೆಗೆ ಬರದ ವಿಚಾರಗಳೆಲ್ಲವೂ ಕೂಡಾ ಶರಣರ ದೃಷ್ಟಿಯಲ್ಲಿ ಕಸಕ್ಕಿಂತ ಕಡೆ. ಇಪ್ಪತ್ತನೇ ಶತಮಾನ ಮತ್ತು ಇಪ್ಪತ್ತೊಂದನೇ ಶತಮಾನದಲ್ಲಿ ಹೊರಗಿನಿಂದ ಬರುವ ವ್ಯವಸ್ಥೆಯನ್ನು ಹೇರುವ ಪಶ್ಚಿಮದ ಎಲ್ಲಾ ಪ್ರಯತ್ನಗಳು ಮತ್ತು ಒಳಗಿನಿಂದ ವ್ಯವಸ್ಥೆಯನ್ನು ತರುವ ಪೌರ್ವಾತ್ಯ ಪರಂಪರೆಯ ಪ್ರಯತ್ನಗಳು ವಿಫಲವಾಗಿರುವಾಗ ಇವೆರಡನ್ನೂ ಒಂದು ಮಾಡುವ ಶರಣರ ಪಥವೇನಿದೆ, ಅದು ಅನುಕರಣೀಯವಾದದ್ದು. ಆ ದಿಸೆಯಲ್ಲಿ ಮರುಪ್ರಯತ್ನ ನಡೆಯಬೇಕು.

○

## ಸಂಸಾರ ಮತ್ತು ನಿದ್ರೆಯ ಮುಲಾಮು

ನಾನಾ ರೀತಿಯ ವಿಚಾರಗಳಿಂದ ತಲೆ ಭಾರವಾಗಿ ನಾನು ನನ್ನ ವಿಶ್ರಾಂತಿ ಕೋಣೆಗೆ ಬಂದೆ. ಒತ್ತೊತ್ತಿ ತುಂಬಿದ ವಾಹನದಲ್ಲಿ ಉಸಿರುಗಟ್ಟಿ ಎಲ್ಲರೂ ಪ್ರಯಾಸಪಡುವಂತೆ ಒಳಗೆ ಮಿದುಳ ಭಿತ್ತಿಯ ಮೇಲೆ ನೂರೆಂಟು ಬಗೆಯ ಒತ್ತಡಗಳು ಬಿದ್ದು ನೋವು ಕಾಣಿಸಿಕೊಳ್ಳುತ್ತದೆ. ಆಗ ಮಿದುಳು ಸಂಕಟಪಡುತ್ತದೆ ಅದನ್ನೇ ತಲೆನೋವು ಎಂದು ಕರೆಯುತ್ತಾರೆ ಅವರು.

ಈ ತಲೆಶೂಲೆಯನ್ನೇ ಸಂತರು ಸಂಸಾರ ಎಂದು ಕರೆದರು. ಸಂಸಾರ ಎಂಬುದು ಸಾಯುವವರೆಗೂ ವಾಸಿಯಾಗದ ಕಾಯಿಲೆ. ಅದನ್ನು ದಾಟಿ ಬನ್ನಿ. ಅದರಾಚೆಗೆ ಹೋಗಿ, ಅದರಿಂದ ಮುಕ್ತರಾಗಿ. ಧ್ಯಾನವೇ ಈ ಕಾಯಿಲೆಗೆ ಮದ್ದು ಎನ್ನುತ್ತಾರೆ ಸಂತರು.

ಮನದೊಳಗೆ ಇಂಥ ಹೊಸ ವಿಚಾರಗಳು ಹೊಕ್ಕಾಗ ತಲೆಭಾರ ಒಂದಷ್ಟು ಕಡಮೆಯಾಗಿ ನನ್ನ ಕಣ್ಣುಗಳಿಗೆ ನಿದ್ರೆ ಬಂತು. ಎಲ್ಲ ಮರೆವೂ ಲೋಕದಲ್ಲಿ ಕಣ್ಮರೆಯಾಯಿತು. ಅಪಾರ ಅಂಧಕಾರದೊಳಗೆ ಸಾಗಿತು ಪಯಣ.

ಅಹಂ ಎಂಬುದು ಸತ್ತುಹೋಗಿ, ಹೆಪ್ಪುಗಟ್ಟಿತು ಕಾಲ. ಸಾವಿಲ್ಲದ ಸಾವು, ಬದುಕಿಲ್ಲದ ಬದುಕು. ಇದೊಂದು ವಿಶಿಷ್ಟವಾದ ವಿಶ್ವ. ಇದು ಅನಂತದ ಹೆಬ್ಬಾಗಿಲು ತಾನೆ? ಇಲ್ಲಿ ಇಂದ್ರಿಯಗಳು ಮಲಗಿ ಎಲ್ಲ ಬಗೆಯ ಅಹಂಕಾರದ ಹೊದಿಕೆಗಳು ಕಳಚಿ, ಆತ್ಮವು ತನ್ನದೇ ಆದ ಅಸ್ತಿತ್ವದ ಮಹಾಸಾಗರದೊಳಗೆ ತೇಲುವುದು. ನಿದ್ರೆಯಿಂದ ನಾನು ಎಚ್ಚೆತ್ತಾಗ ಒಳಹೊರಗೆಲ್ಲ ಶಾಂತಿ ನೆಲೆಯೂರಿತ್ತು!

ಮೂಲ : ಶ್ರೀ ಸಿದ್ಧೇಶ್ವರ ಸ್ವಾಮಿಗಳು
ಅನುವಾದ : ಸಿದ್ಧರಾಜ ಪೂಜಾರಿ

## ಅಭಿನಂದನೆಗಳು

ಕಲಬುರ್ಗಿ ಜಿಲ್ಲಾ ಶರಣ ಸಾಹಿತ್ಯ ಪರಿಷತ್ ಹಾಗೂ ಹೈ.ಕ. ಕನ್ನಡ ಸಾಹಿತ್ಯ ಮಂಟಪ ಇವರ ಸಂಯುಕ್ತ ಆಶ್ರಯದಲ್ಲಿ ಶ್ರಾವಣ ಮಾಸದ ಪ್ರಯುಕ್ತ "ಯುವಕರಿಗಾಗಿ ಶರಣ ಸಂದೇಶ" ಎಂಬ ಕಾರ್ಯಕ್ರಮ ಜಿಲ್ಲೆಯ ವಿವಿಧ ಶಾಲಾ ಕಾಲೇಜುಗಳಲ್ಲಿ ನಡೆಯಿತು.

ರಾಷ್ಟ್ರದಲ್ಲಿ ಸುಮಾರು ೪೦ ದಶಲಕ್ಷ ಜನ ೨೫ ವರ್ಷದ ಒಳಗಿನವರಾಗಿದ್ದು ರಾಷ್ಟ್ರ ನಿರ್ಮಾಣದಲ್ಲಿ ಇವರ ಪಾಲು ಮುಖ್ಯ. ಇಂದಿನ ಯುವಕರು ನಾಳಿನ ನಾಗರಿಕರು. ಯುವಕರೇ ರಾಷ್ಟ್ರದ ಶಕ್ತಿ.

ದೇಶದ ಸಂಪನ್ಮೂಲಗಳನ್ನು (ವಚನ ಸಾಹಿತ್ಯ) ಸಮಗ್ರವಾಗಿ ಬಳಸಿಕೊಂಡು ಬಲಿಷ್ಠ ರಾಷ್ಟ್ರ ಕಟ್ಟಲು ಯುವಕರು ಮುಂದೆ ಬರಬೇಕೆಂಬ ಘನ ಉದ್ದೇಶ ಇಟ್ಟುಕೊಂಡು ನಡೆಸಿದ ಈ ಕಾರ್ಯಕ್ರಮ ಒಂದು ಉತ್ತಮ ಬೆಳವಣಿಗೆಯಾಗಿದೆ. ಇಂತಹ ಅರ್ಥಪೂರ್ಣ ಕಾರ್ಯಕ್ರಮ ಯೋಜಿಸಿದ್ದ ಕಲಬುರ್ಗಿ ಜಿಲ್ಲಾ ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷರಾಗಿರುವ ಪ್ರೊ. ಎಸ್. ಜಿ. ಮೇಳಕುಂದಿ ಹಾಗೂ ಕಲಬುರ್ಗಿ ಹೈ.ಕ. ಕನ್ನಡ ಸಾಹಿತ್ಯ ಮಂಟಪ ಕೇಂದ್ರದ ಅಧ್ಯಕ್ಷರಾದ ಶ್ರೀ ಅಪ್ಪಾರಾವ ಅಕ್ಕೋಣಿ ಇವರುಗಳನ್ನು ಅಭಿನಂದಿಸುತ್ತೇನೆ.

–ಶಿವರಾಜ ಎಸ್. ಅಂಡಗಿ
ಅಧ್ಯಕ್ಷರು, ಯುವ ವೀರಶೈವ ಘಟಕ
ಕಲಬುರ್ಗಿ





# ವಚನಕಾರ ದಂಪತಿಗಳು



ಡಾ. ರಾಜಶೇಖರ ಇಚ್ಚಂಗಿ
'ಚೈತ್ರ' ವಿವೇಕಾನಂದ ನಗರ, ಹುಕ್ಕೇರಿ, ಜಿ. ಬೆಳಗಾವಿ

"ಹನ್ನೆರಡನೆಯ ಶತಮಾನದಲ್ಲಿ ಅನೇಕ ಶಿವಶರಣರು ಆಗಿಹೋಗಿದ್ದಾರೆ. ಅವರಲ್ಲಿ ೧೫೦ ಕ್ಕಿಂತ ಹೆಚ್ಚು ಜನ ವಚನಕಾರರು, ೩೦ ಕ್ಕಿಂತ ಹೆಚ್ಚು ವಚನಕಾರ್ತಿಯರು ಆಗಿಹೋಗಿದ್ದಾರೆ ಇದರಿಂದ ಪುರುಷರು ಮಾತ್ರವಲ್ಲದೆ, ಸ್ತ್ರೀಯರೂ ಕೂಡ ತಮ್ಮ ಹಾಗೆ ವಚನಗಾರ್ತಿಯರಾಗುವಂತೆ ಮಾಡಲು ಯತ್ನಿಸುತ್ತಿದ್ದರೆಂದೂ, ಅಲ್ಲದೆ ಅವರು ಸಂಸ್ಕೃತವನ್ನು ಅಭ್ಯಾಸ ಮಾಡಿದ್ದರು ಎಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ವಚನಗಾರ್ತಿಯರ ವಚನಗಳಲ್ಲಿ ಶಿವಾನುಭವದ ಶ್ರೇಷ್ಠ ತತ್ವಗಳು ಅಡಕವಾಗಿದ್ದು ಅವರೆಲ್ಲರೂ ಶಿವಾನುಭವಕ್ಕೆ ಪೂರಕವಾಗಿ ನಡೆದುಕೊಳ್ಳುತ್ತಿದ್ದರಲ್ಲದೆ, ಪತಿಯು ತಪ್ಪು ಮಾರ್ಗ ಹಿಡಿದಾಗ, ಅವನಿಗೆ ಬುದ್ಧಿ ಹೇಳಿ, ಸರಿಯಾದ ಮಾರ್ಗಕ್ಕೆ ತಂದವರು ಉಂಟು"

ವಚನಕಾರರಾದ ಶಿವಶರಣರು ತಮ್ಮ ಪತ್ನಿಯರನ್ನು ತಮ್ಮಂತೆಯೇ ವಚನಕಾರರನ್ನಾಗಿ ಶಿವಾನುಭವಿಗಳಾಗಿ ಮಾಡಿದ್ದು ಕಂಡುಬರುತ್ತದೆ. ಬಸವಣ್ಣನವರು ತಮ್ಮ ಒಂದು ವಚನದಲ್ಲಿ—

*'ಗಂಡ ಶಿವಲಿಂಗ ದೇವರ ಭಕ್ತ*
*ಹೆಂಡತಿ ಮಾರಿ ಮಸಣಿಯ ಭಕ್ತೆ*
*ಗಂಡ ಕೊಂಬುದು ಪಾದೋದಕ–ಪ್ರಸಾದ*
*ಹೆಂಡತಿ ಕೊಂಬುದು ಸುರೆ ಮಾಂಸ*
*ಭಾಂಡ ಭಾಜನ ಶುದ್ಧವಿಲ್ಲದವರ ಭಕ್ತಿ*
*ಹೆಂಡದ ಮಡಕೆ, ಹೊರಗೆ ತೊಳೆದಂತೆ ಕೂಡಲ*
*ಸಂಗಮದೇವಾ'* *[ಅ.ಆ.ಪು. ೬೩]*

ಪ್ರಸ್ತುತ ವಚನದಲ್ಲಿ ತನುವಿನ ಆಪ್ಯಾಯನಕ್ಕಾಗಿ ಪಾದೋದಕ ಪ್ರಸಾದ ತೆಗೆದುಕೊಂಡು ಮನದ ತೃಪ್ತಿಗಾಗಿ ಸುರೆಮಾಂಸ ಭುಂಜಿಸಿದರೆ ಆತ ಭಕ್ತನೆಂದು ಹೇಗೆ ಕರೆಯಿಸಿಕೊಳ್ಳುತ್ತಾನೆ? ತನು ಧ್ಯಾನಕ್ಕೆ ಕುಳಿತಿತ್ತು, ಮನ ಹೆಂಡ ಮಾಂಸಕ್ಕೆ ಎಳೆಯುತ್ತಿತ್ತೆಂದರೆ ಧ್ಯಾನ ಸಾರ್ಥಕವಾಗುವುದೇ? 'ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ ಎನ್ನುವಂತೆ, ಕಾಯಾ–ವಾಚಾ–ಮನಸಾ ಹೀಗೆ ತ್ರಿಕರಣ ಪೂರ್ವಕವಾದ ಭಕ್ತಿಯೇ ಶಿವನಿಗೆ ಒಪ್ಪಿತವಾಗುವುದು. ಅಂಥ ಭಕ್ತಿ ೧೨ನೇ ಶತಮಾನದ ಶಿವಶರಣರದು.

**ಮೋಳಿಗೆಯ ಮಾರಯ್ಯ** : ಒಬ್ಬ ಶ್ರೇಷ್ಠ ವಚನಕಾರನಾಗಿದ್ದು, ಈತನ ೮೧೯ ವಚನಗಳು ಉಪಲಬ್ದವಾಗಿವೆ. ಅವುಗಳಲ್ಲಿ ೧೫೯ ಬೆಡಗಿನ ವಚನಗಳು ಸೇರಿವೆ. ಈತನ ವಚನಗಳಲ್ಲಿ 'ಷಟ್ಸ್ಥಲ ಸಿದ್ಧಾಂತ' ಅತ್ಯಂತ ಯಶಸ್ವಿಯಾಗಿ ನಿರೂಪಿತವಾಗಿದೆ. ಶರಣಸ್ಥಲದಲ್ಲಿ ಬರುವ.

*'ಯಾತದ ತುದಿಯಲ್ಲಿ ಕಟ್ಟಿದ ಮಡಕೆಯಂತೆ*
*ನೀತಿವಂತರು ಮೆಚ್ಚಿದರೆ*
*ಪಾತಾಳದ ಉದಕವ ತಂದು*
*ಪಾತಾಗೆ ಹರಹಿದ ತೆರನಂತೆ*
*ಸರ್ವಮಯದಲ್ಲಿ ಒಪ್ಪಿಪ್ಪ ವಸ್ತುವನರಿದು*
*ನಿಜಾರ್ತನಾಗಬಲ್ಲಡೆ ಆತನೇ*
*ಜೀವನ್ಮುಕ್ತ ನಿಃಕಳಂಕ ಮಲ್ಲಿಕಾರ್ಜುನಾ*
*[ಕ.ಅ.ಸ.ಸಾ.ಚ. ೭೩೬]*

ಎನ್ನುವಲ್ಲಿ ಜೀವನ್ಮುಕ್ತನಾಗಬಯಸುವ ಶರಣ, ಅನುಸರಿಸಬೇಕಾದ ಮಾರ್ಗವನ್ನು ಸ್ಪಷ್ಟವಾಗಿ ಸೂಚಿಸಿದ್ದಾನೆ.

**ಮಹಾದೇವಿಯಮ್ಮ** : ಈತನ ಪತ್ನಿ. ಈಕೆಯ ಉಪಲಬ್ಧವಾದ ವಚನಗಳು ಕೆಲವೇ ಆದರೂ ಅವುಗಳಲ್ಲಿ ಮಾರಯ್ಯನ ದಾಂಪತ್ಯ ಜೀವನದ ಸ್ವಾರಸ್ಯವನ್ನು ಕಾಣಬಹುದು. ಪ್ರತಿಯ ಕಾಯಕ ದಾಸೋಹದಲ್ಲಿ ಭಾಗವಹಿಸಿದ್ದಳು.

**ಉರಿಲಿಂಗಪೆದ್ದಿ** : ಉರಿಲಿಂಗದೇವನ ಶಿಷ್ಯ. ಒಮ್ಮೆ ಉರಿಲಿಂಗದೇವನು ನಂದಿವಾಡದ ಸೂರಯ್ಯ ಭಕ್ತನಿಗೆ ಗುಪ್ತ ರೀತಿಯಲ್ಲಿ ಲಿಂಗದೀಕ್ಷೆ ನೀಡುವುದನ್ನು ಚೋರ ವೃತ್ತಿಯ ಪೆದ್ದಣ್ಣ ನೋಡಿ, ತನಗೂ ಲಿಂಗ ಬೇಕೆಂಬ ಅಪೇಕ್ಷೆಯಿಂದ, ನಿತ್ಯವೂ ಉರಿಲಿಂಗದೇವನ ಮನೆಗೆ ಹುಲ್ಲು–ಕಟ್ಟಿಗೆ ಹೊತ್ತು ತರುತ್ತಿದ್ದನು. ಇದಕ್ಕೆ ಪ್ರತಿಯಾಗಿ ಹಣ ಪಡೆಯದೆ ಲಿಂಗದೀಕ್ಷೆ ನೀಡಬೇಕೆಂದು ಪದೇ ಪದೇ ಕೇಳಲು ಸಿಟ್ಟಿಗೆದ್ದ ಉರಿಲಿಂಗದೇವ 'ಗೆಜಾದಗಡಿಜಾ' ಎಂದು ಗದರಿಸಿ ಕಲ್ಲನ್ನು ಎಸೆಯಲು

ಆ ಶಬ್ದವನ್ನು 'ಮಂತ್ರ'ವೆಂದು ಆ ಕಲ್ಲನ್ನು 'ಲಿಂಗವೆಂದು ಭಾವಿಸಿ, ಶಿವಭಕ್ತನಾಗಿ ಪರಿವರ್ತನೆಗೊಂಡನು. ಪೆದ್ದಣ್ಣನು ಉರಿಲಿಂಗದೇವನ ತರುವಾಯ ಗುರುಪೀಠವೇರಿದನು. ಕರ್ನಾಟಕದಲ್ಲಿ ಹರಿಜನ ಶಿವಭಕ್ತರ ಅನೇಕ ಮಠಗಳಿದ್ದು ಅವುಗಳನ್ನು 'ಉರಿಲಿಂಗಪೆದ್ದಿ ಮಠ'ಗಳೆಂದು ಕರೆಯುತ್ತಾರೆ. 'ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರ' ಎಂಬ ಅಂಕಿತದಿಂದ ೩೬೬ ವಚನಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಸಂಸ್ಕೃತ ಉದ್ಧರಣೆಗಳು ತುಂಬಿಕೊಂಡಿವೆ. ಶುದ್ರನೊಬ್ಬ ಇಷ್ಟು ಪ್ರಮಾಣದಲ್ಲಿ ಸಂಸ್ಕೃತ ಶ್ಲೋಕ ಬಳಸಿರುವುದು ಸವರ್ಣೀಯರಿಗೆ ತೋರಿಸಿದ ಒಂದು ಭಾಷಿಕ ಆಹ್ವಾನವೆಂಬಂತಿದೆ—

*ಉದಾ : ಶ್ರುತಿ "ಏಕೋದೇವ್ರೋನ ದ್ವಿತೀಯಾಯತಸ್ಥೇ"*
*ಎಂಬುದಾಗಿ 'ಶಿವನೊಬ್ಬನೇ ದೈವವೆಂದು ತೋರಿಸಿ*
*ಕೊಟ್ಟ ಶ್ರೀಗುರು [ಉ.ಪೆ.ವ.ಪು. ೪೧೫]*

ಹೀಗೆ ವೇದ, ಉಪನಿಷತ್ತು ಆಗಮ ಮೊದಲಾದ ಅನೇಕ ಗ್ರಂಥಗಳಲ್ಲಿರುವ ವಾಕ್ಯಗಳನ್ನು ಹೇರಳವಾಗಿ ಉಪಯೋಗಿಸಿದ್ದಾನೆ. ಬಸವಾದಿ ಶಿವಶರಣರು ಪ್ರತಿಪಾದಿಸಿದ ತತ್ವಗಳಿಗೆ ಪುರಾತನ ಸಂಸ್ಕೃತ ಗ್ರಂಥಗಳು ಆಧಾರಗಳಿವೆ ಎಂಬುದನ್ನು ತೋರಿಸುವುದೇ ಅವನ ಮುಖ್ಯ ಉದ್ದೇಶವಾಗಿತ್ತು ಎಂದು ತೋರುತ್ತದೆ.

**ಉರಿಲಿಂಗಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ :** ೧೨ನೆಯ ಶತಮಾನದಲ್ಲಿ ಕಂಡುಬರುವ ಏಕೈಕ ದಲಿತ ವಚನಕಾರ್ತಿಯೆಂದರೆ ಉರಿಲಿಂಗ ಪೆದ್ದಿಗಳ ಪತ್ನಿ ಕಾಳವ್ವೆ. ಕೆಳವರ್ಗಕ್ಕೆ ಸೇರಿದ ಈ ದಂಪತಿಗಳು ಕೊರಳಿಮಠದ ಉರಿಲಿಂಗದೇವನ ಅನುಗ್ರಹದಿಂದ ಲಿಂಗದೀಕ್ಷೆ ಪಡೆದು, ವೀರಶೈವ ಧರ್ಮದ ಕಕ್ಷೆಗೆ ಬಂದರು. ಈಕೆ ಸ್ವಭಾವತಃ ನೇರ ನುಡಿಯ ಮಹಿಳೆ. 'ಉರಿಲಿಂಗಪೆದ್ದಿಗಳರಸು' ಎಂಬ ಅಂಕಿತದಿಂದ ೬ ವಚನಗಳನ್ನು ರಚಿಸಿದ್ದಾಳೆ. ಸಾಮಾಜಿಕ ನೆಲೆಯಲ್ಲಿ ಹುಟ್ಟಿನಿಂದ ಬಂದ ಜಾತಿ ಶ್ರೇಷ್ಠ-ನೀಚ ಎಂದು ಗೆರೆಯಳೆದು ಪ್ರತ್ಯೇಕಿಸುವ ಪರಂಪರೆಯ ಅನ್ಯಾಯವನ್ನು ಅವಳು ತನ್ನ ವಚನದಲ್ಲಿ ಎತ್ತಿರುವಳು.

*"ಕುರಿ ಕೋಳಿ ಕಿರಿ ಮೀನು ತಿಂಬುವರಿಗೆಲ್ಲ ಕುಲಜ*
*ಕುಲಜರೆಂದೆಂಬರು*
*ಶಿವಗೆ ಪಂಚಾಮೃತವ ಕರೆವ ಪಶುವ ತಿಂಬ ಮಾದಿಗ ಕೀಳು*
*ಜಾತಿಯೆಂಬರು*
*ಅವರೆಂತು ಕೀಳು ಜಾತಿಯಾದರು? ಜಾತಿಗಳು ನೀವೇಕೆ*
*ಕೀಳಾದಿರೋ?*
*[ಸಂ.ಶೋ.ಪು. ೪೯]*

ಎಂದು ವಿಡಂಬಿಸಿದ್ದಾಳೆ.

ಕಾಳವ್ವೆಯು ತನ್ನ ಪತಿಯು ಕಳವು ಮಾಡುತ್ತ ಗುಡ್ಡ-ಬೆಟ್ಟಗಳಲ್ಲಿ ಅಲೆದಾಡುತ್ತಿರುವಾಗ, ಅಲ್ಲಿಯ ಜನರ ಕೈಯಲ್ಲಿದ್ದ ತುಮರಿಕಟ್ಟಿಗೆಯ ಕೊಳ್ಳಿಯನ್ನು ಕಂಡಿರಬಹುದು. ಉರಿಲಿಂಗಪೆದ್ದಿಯ ಜೊತೆಗೆ ಸಂಸ್ಕೃತವನ್ನು ಅಭ್ಯಾಸ ಮಾಡಿದ್ದಳೆಂದು ಅವಳ ಈ ಕೆಳಗಿನ ವಚನಗಳಿಂದ ತಿಳಿದುಬರುತ್ತದೆ.

*'ತುಮರಿಯ ಕೊಳ್ಳಿಯಂತೆ ಉರಿವಾತ ಭಕ್ತನೆ?*
*ಹುಸಿದು ತಂದು ಮಾಡುವಾತ ಭಕ್ತನೆ?*
*ಭಕ್ತರ ಕುಲವನ್ನೆತ್ತಿ ನಿಂದಿಸುವಾತ ಭಕ್ತನೆ?*
*ಶಿವಭಕ್ತಂವಿನಂಧ್ಯಾಶು ಕೋಟಿ ಜನ್ಮ ಸುಕರಃ*
*ಸಪ್ತ ಜನ್ಮಭವೇತ್ ಶ್ರೋಪ್ಯಾದಾಸೀಗರ್ಭೇತುಚಾಯತೆ॥*
*[ಹ.ನು.ಪ. ೨೬೧]*

ಇಲ್ಲಿ ಭಕ್ತನ ಲಕ್ಷಣವನ್ನು ಚೆನ್ನಾಗಿ ನಿರೂಪಿಸಲಾಗಿದ್ದು ಇಲ್ಲಿ ಬಂದಿರುವ ಸಂಸ್ಕೃತ ಶ್ಲೋಕ ಅಶುದ್ಧ ರೂಪವಿದೆ. ಅಸ್ಪೃಶ್ಯ ಸ್ತ್ರೀ ಒಬ್ಬಳು ವಚನ ರಚಿಸಿರುವದಲ್ಲದೆ ಸಂಸ್ಕೃತ ಶ್ಲೋಕವನ್ನು ಬಳಸಿರುವದು. ಉಚ್ಚ ವರ್ಗದವರಿಗೆ ಒಂದು ಆಹ್ವಾನದಂತಿದೆ.

**ಆಯ್ದಕ್ಕಿ ಮಾರಯ್ಯ ಮತ್ತು ಲಕ್ಕಮ್ಮ :** ಬೀದಿಯಲ್ಲಿ ಬಿದ್ದ ಅಕ್ಕಿಯನ್ನು ಆಯ್ದು ತಂದು ದಾಸೋಹ ಮಾಡುವ ಮಾರಯ್ಯ ಇವನ ಹೆಂಡತಿ ಲಕ್ಕಮ್ಮ. ಈತನಿಗೆ ಹೆಚ್ಚು ಧಾನ್ಯವನ್ನು ಒದಗಿಸುವ ಇಚ್ಛೆಯಿಂದ ಒಮ್ಮೆ ಬಸವಣ್ಣ ಬಹಳಷ್ಟು ಅಕ್ಕಿಯನ್ನು ಬೀದಿಯಲ್ಲಿ ಚೆಲ್ಲಿಸಿದ. ಅವೆಲ್ಲವನ್ನು ಆಯ್ದುಕೊಂಡು ಮನೆಗೆ ಬಂದ ಗಂಡನಿಗೆ "ಶರಣರು ಅತಿಯಾದ ಆಸೆಯನ್ನು ಮಾಡಬಾರದು, ಹೆಚ್ಚಿನ ಅಕ್ಕಿ ತಂದುದಕ್ಕೆ ನನ್ನ ಒಪ್ಪಿಗೆ ಇಲ್ಲ" ಎಂದು ಲಕ್ಕಮ್ಮ ಹೇಳಿದಳು. ಇಬ್ಬರಿಗೂ 'ಅಸಂಗ್ರಹ ತತ್ವ'ದ ಬಗ್ಗೆ ವಾದ, ಪ್ರತಿವಾದ ನಡೆಯಿತು. ಹೆಂಡತಿಯ ನಿಲವನ್ನು ಮನ್ನಿಸಿದ ಮಾರಯ್ಯ ಹೆಚ್ಚಿನ ಅಕ್ಕಿಯನ್ನು ಮರಳಿಸಿದನೆಂದು ಈತನ ಜೀವನ ಚರಿತ್ರೆಯಿಂದ ತಿಳಿದುಬರುತ್ತದೆ. 'ಅಮರೇಶ್ವರ ಲಿಂಗ' ಎಂಬುದು ಇವನ ಮುದ್ರಿಕೆ ಈತನ ಉಪಲಬ್ಧವಾದ ವಚನಗಳ ಸಂಖ್ಯೆ ೩೨.

ಮಾರಯ್ಯನ ಹೆಂಡತಿ ಲಕ್ಕಮ್ಮನು ವಚನಗಾರ್ತಿ. ಪತಿ ದಾರಿ ತಪ್ಪಿದಾಗ ಸನ್ಮಾರ್ಗಕ್ಕೆ ಹಚ್ಚಿದ ಧೀರ ಮಹಿಳೆ.

ಈಕೆಯ ೨೫ ವಚನಗಳು ಉಪಲಬ್ಧವಾಗಿವೆ. ಅವುಗಳ ಅಂಕಿತ 'ಮಾರಯ್ಯ ಪ್ರಿಯ ಅಮರೇಶ್ವರ ಲಿಂಗ' ಎಂದಿದೆ.

(ಮುಂದುವರೆಯುವುದು)





# "ಬಸವಾ...ಬಸವಾ..."

-ಶಂಕರಗೌಡ ಬೆಟ್ಟದೂರು, ಕಪ್ಪಗಲ್ಲು, ರಾಯಚೂರು ಜಿಲ್ಲೆ

ರಾಯಚೂರಿಗೂ ಅಲ್ಲಿಯ ಸಂಗಡಿಗರ ಸಮಿತಿಯ ಗೆಳೆಯರಾದ ಶ್ರೀ ಶಾಂತರಸ, ನೀರಮಾನ್ವಿ ವೀರಣ್ಣಗೌಡ, ಚೆನ್ನಬಸಪ್ಪ ಬೆಟ್ಟದೂರು, ಶಂಕರಗೌಡ ಬೆಟ್ಟದೂರು, ಕರಡಿಗುಡ್ಡದ ಬಸವನಗೌಡ, ಜುಕೂರು ಮಲ್ಲನಗೌಡ ಮೊದಲಾದ ಗೆಳೆಯರೊಂದಿಗೂ ಆತ್ಮೀಯ ಸಂಬಂಧ ಬೆಳೆದುಬಂದಿತ್ತು ಶ್ರೀ ಮಲ್ಲಾಬಾದಿ ವೀರಭದ್ರಪ್ಪನವರಿಗೆ.

ಶ್ರೀ ಮಲ್ಲಾಬಾದಿ ವೀರಭದ್ರಪ್ಪ, ಧಾರವಾಡ ಇವರಿಗೆ 'ಮಲ್ಲಾಬಾದಿ' ಎಂಬ ಅಡ್ಡ ಹೆಸರು ಹೇಗೆ ಬಂತು? ಎಂಬ ಪ್ರಶ್ನೆಗೆ ಮಲ್ಲಾಬಾದಿಯವರು-"ನಮ್ಮ ಪೂರ್ವಜರು ಮಲ್ಲಾಬಾದಿಯಿಂದ ದಾವಣಗೆರೆಗೆ ವಲಸೆ ಬಂದರು. ಅಲ್ಲಿಂದ ನಾನು ಅನ್ನವನ್ನರಸುತ್ತ ಧಾರವಾಡಕ್ಕೆ ಬಂದರೂ ಮೂಲ 'ಮಲ್ಲಾಬಾದಿ' ಊರಿನ ಹೆಸರು ನಮಗೆ ವಂಶಪರಂಪರೆಯಾಗಿ ಬಂದಿದೆ"-ಎಂದು ಹೇಳುತ್ತಿದ್ದರು.

ರಾಯಚೂರಿಗೆ ಶ್ರೀ ಮಲ್ಲಾಬಾದಿ ವೀರಭದ್ರಪ್ಪನವರು ಬಂದರೆ, ಅವರು ಎಲ್ಲಿಯೇ ಇರಲಿ, ಎಲ್ಲಿಗೇ ನಡೆಯಲಿ, ಅಲ್ಲಿ ಸಾಹಿತ್ಯಗೋಷ್ಠಿ, ಅನುಭಾವಗೋಷ್ಠಿ (ಮಂಟಪ) ನಡೆಯುತ್ತಿರುತ್ತಿತ್ತು.

ಒಮ್ಮೆ ರಾಯಚೂರಿನ ಕಾರ್ಯಕ್ರಮ ಮುಗಿಸಿಕೊಂಡು, ಮರುದಿನ ಧಾರವಾಡಕ್ಕೆ ಹೋಗುವವರಿದ್ದರು. ಆಗ ನಾನು, "ನಿಮ್ಮೂರನ್ನು ನೋಡುವುದಿಲ್ಲವೆ?" ಎಂದು ಕೇಳಿದೆ.

"ನೀವು ನೆನಪು ಮಾಡಿದುದು ಒಳ್ಳೆಯದೇ ಆಯಿತು. ನೀವು ನನ್ನ ಹೃದಯದ ಹಂಬಲವನ್ನೇ ಪ್ರಶ್ನೆ ರೂಪದಲ್ಲಿ ವ್ಯಕ್ತಗೊಳಿಸಿದ್ದೀರಿ. ನಡೆಯಿರಿ. ನಾಳೆಯೇ ಹೋಗೋಣ" ಎಂದು ತಮ್ಮ ಬಹುದಿನದ ಬಯಕೆ ಪೂರ್ಣಗೊಳ್ಳುವ ಸದವಕಾಶ ದೊರೆಯುತ್ತಿರುವುದಕ್ಕಾಗಿ ಸಂತಸಗೊಂಡರು.

ಮರುದಿನ ಶ್ರೀ ಮಲ್ಲಾಬಾದಿ ವೀರಭದ್ರಪ್ಪನವರೊಂದಿಗೆ ನಾನು, ಶಾಂತರಸರು, ವೀರಣ್ಣಗೌಡ, ಅಣ್ಣ ನೀರಮಾನ್ವಿ-ಇನ್ನಾರಾರಿದ್ದರೋ ನೆನಪಾಗಲೊಲ್ಲದು-ಮೊದಲಾದ ನಾಲ್ಕಾರು ಜನರು ಕೂಡಿ ಮಲ್ಲಾಬಾದಿ (ಊರಿ)ಗೆ ಹೊರಟೆವು.

ಈಗಿನ ಊರು ದಾಟಿ, ಆಗಿನ ಕಾಲದ ಐತಿಹಾಸಿಕ ಕೋಟೆಯತ್ತ ನಾವು ಹೋಗಬೇಕಾಗಿತ್ತು. ಹೊಲದ ಒಡ್ಡಿನಲ್ಲಿ ನೀರು ಹೊರಗೆ ಹೋಗುವುದಕ್ಕಾಗಿ ಮೋರಿಯನ್ನು ಮಾಡಲಾಗಿತ್ತು. ಆ ಮೋರಿಯ ಮೇಲಿನ ಕಲ್ಲನ್ನು ಏರುವಾಗ ಸ್ವಲ್ಪ ಸ್ಥೂಲಕಾಯರೆಂದೇ ಹೇಳಬಹುದಾದ ಮಲ್ಲಾಬಾದಿ ವೀರಭದ್ರಪ್ಪನವರು ಕಾಲು ಜಾರಿ ಬೀಳುವವರಿದ್ದರು. ಎಲ್ಲ ರೀತಿಯಲ್ಲಿ ಮಲ್ಲಾಬಾದಿ ವೀರಭದ್ರಪ್ಪನವರನ್ನೇ ಹೋಲುತ್ತಿದ್ದ ನೀರಮಾನ್ವಿಯ ವೀರನಗೌಡರು ಆಸರೆಯಾಗಿ ನಿಂತು, ಹಿಡಿದುದರಿಂದಲೇ ಶ್ರೀಮಲ್ಲಾಬಾದಿಯವರಿಗೆ ಯಾವುದೇ ತೊಂದರೆ ಆಗಲಿಲ್ಲ. ಅವರು ಕಾಲು ಜಾರಿ ಬೀಳುವದರಲ್ಲಿದ್ದಾಗ – "ಬಸವ! ಬಸವಾ !!" ಎಂಬ ಉದ್ಗಾರ ಕೇಳಿಬಂದು,ಮಲಾಬಾದಿಯವರನ್ನು ಭಾವಾವೇಶದಿಂದ ಹಿಂದಿರುಗಿ ನೋಡುವಂತೆ ಮಾಡಿತು. ಬಿಳಿಯ ಗಡ್ಡ, ಬಿಳಿಯ ಮೀಸೆಯ ವಯಸ್ಸಾದ ವ್ಯಕ್ತಿಯೊಬ್ಬನನ್ನು ಕಂಡು ಅವಾಕ್ಕಾದರು. "ಯಾರಪ್ಪಾ, ನೀನು" ಮಲ್ಲಾಬಾದಿಯವರ ಪ್ರಶ್ನೆ. "ನಾನ್ರೀ, ಇದೇ ಊರಿನಾತ"—ವ್ಯಕ್ತಿಯ ಉತ್ತರ. "ನಿನ್ನ ಹೆಸರೇನಜ್ಜ?"—ಮಲ್ಲಬಾದಿ ಕೇಳಿದರು. "ಕಾಸೀಮ್ ಸಾಬ್ ಅಂತಾರ್ರೀ" ಎಂದ ಆ ಹಿರಿಯ. ಶ್ರೀ ಮಲ್ಲಾಬಾದಿಯವರ ಬಾಯಿಂದ ಮಾತುಗಳೇ ಹೊರಡದಾದವು. ಕಣ್ಣಂಚಿನಲ್ಲಿ ಆನಂದದ ಹನಿಗಳು ಮೂಡಿದವು. ನಮ್ಮತ್ತ ತಿರುಗಿ-"ನೋಡ್ರಿ, ಬಸವಣ್ಣ ಮಾಡಿದ ಘನಕಾರ್ಯ ಎಂಥದು! ಜಾತಿ, ವರ್ಣ, ವರ್ಗ, ದೇಶ, ಕಾಲ ಮೀರಿ ಶ್ರೀಸಾಮಾನ್ಯರ ಹೃದಯ ದೇಗುಲದಲ್ಲಿ ನೆಲಸಿದ್ದಾನೆ, ನಮ್ಮ ಬಸವಣ್ಣ. ಇದು ನನ್ನ ವಂಶಜರ ಊರೆಂಬ ಹೆಮ್ಮೆ ಸಾರ್ಥಕವಾಯಿತು. ಕಾಸೀಮ್ ಸಾಬನನ್ನು ನಾನು ಮರೆಯುವುದಿಲ್ಲ. 'ಸಲಾಮ್'" ಎಂದು ವಂದಿಸಿದರು. ನಾವು ಮೂಕವಿಸ್ಮತ ಸಾಕ್ಷಿಯಾಗಿದ್ದೆವು.

(ಕೆಲವು ದಿನಗಳ ಹಿಂದೆ ನಾನು ರಾಯಚೂರಿಗೆ ಹೋಗಿದ್ದಾಗ ಭೇಟಿಯಾದ ಶಾಂತಿನಿಕೇತನದ ಹಿರಿಯ ಕಲಾವಿದರೂ, ನನ್ನ ಆತ್ಮೀಯರೂ ಆದ ಶ್ರೀ ಶಂಕರಗೌಡ ಬೆಟ್ಟದೂರು ಅವರು ಈ ಪ್ರಸಂಗ ನೆನಪು ಮಾಡಿಕೊಂಡರು. ಅದನ್ನೇ ನಮ್ಮ 'ಮಹಾಮನೆ'ಗೆ ಬರೆದು ಕಳುಹಿಸಲು ಕೋರಿದ್ದೆ. ಬಸವ ಪ್ರಭಾವ ಕಾಸೀಮ್‌ಸಾಬರ ನಾಡಿಯಲ್ಲಿ ಮಿಡಿದ ಈ ಪ್ರಸಂಗವನ್ನು ಮಹಾಮನೆಯ ಓದುಗರ ಮನಮುಟ್ಟುವಂತಾಗಲಿ.

-ಗೊ.ರು.ಚ.)

*ಕಾಲವೆಂದೂ ನಿಲ್ಲುವುದಿಲ್ಲ; ಇದಕೆ ನಿಲುಗಡೆ ಎನ್ನುವುದೇ*
*ಮೊದಲಿಲ್ಲ*
*ತಮ್ಮ ಕೃತಿಗಳಲಿದನು ಕವಿ ಕಲಾವಿದರು ನಿಲ್ಲಿಸಿದ್ದೇನು ಸುಳ್ಳಲ್ಲ!*
*-ಶಾಂತರಸ*

# ಹಾವೇರಿ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಮತ್ತು ಜಿಲ್ಲಾ ಕದಳಿ ಮಹಿಳಾ ವೇದಿಕೆ

(ಇದು ಹಾವೇರಿ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಮತ್ತು ಜಿಲ್ಲಾ ಕದಳಿ ಮಹಿಳಾ ವೇದಿಕೆಯ ವತಿಯಿಂದ ತಾಲ್ಲೂಕು ಘಟಕಗಳಿಗೆ ನೀಡಿರುವ ಒಂದು ಮಾರ್ಗಸೂಚಿ. ಇದನ್ನು ಎಲ್ಲ ಕ್ಷೇತ್ರ ಘಟಕಗಳೂ ಅನುಸರಿಸಬಹುದು)

* ಪರಿಷತ್ತಿನ ಗೌರವಾಧ್ಯಕ್ಷರು : ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಹಾಗೂ ಪೂಜ್ಯ ಡಾ|| ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು; ಅಧ್ಯಕ್ಷರು :ಶ್ರೀ ಗೊ.ರು. ಚನ್ನಬಸಪ್ಪ ಅವರು.
* ಪರಿಷತ್ತಿನ ಮಹಿಳಾ ಘಟಕವೇ ಕದಳಿ ವೇದಿಕೆ. ಹಲವು ಮಹಿಳಾ ಸಂಘಟನೆಗಳ ಸಮನ್ವಯ ವೇದಿಕೆ. ಸಮಾನ ಮನಸ್ಕ ಮಹಿಳಾ ಸಂಘಟನೆಗಳು ಒಂದೆಡೆ ಸೇರಿ ಕಾರ್ಯಕ್ರಮ ನಿರೂಪಿಸುವ ಒಕ್ಕೂಟ.
* ಪರಿಷತ್ತಿನಲ್ಲಿ ಎಲ್ಲ ಜಾತಿ ಜನಾಂಗದವರಿಗೂ ಮುಕ್ತ ಪ್ರಾತಿನಿಧ್ಯ ಮತ್ತು ಮುಕ್ತ ಅವಕಾಶವಿದೆ. ಶರಣ ಸಿದ್ಧಾಂತದಲ್ಲಿ ವಿಶ್ವಾಸವಿರುವ ಎಲ್ಲರಿಗೂ ಸ್ವಾಗತವಿದೆ.
* ೧೨ನೆಯ ಶತಮಾನದ ಬಸವಾದಿ ಶರಣ ಶರಣೆಯರ ಸಂದೇಶಗಳನ್ನು ಮನೆ-ಮನೆಗಳಿಗೆ ಪ್ರಸಾರ ಮಾಡುವುದು ಹಾಗೂ ಮಹಿಳೆಯರಲ್ಲಿ ಆತ್ಮವಿಶ್ವಾಸ ಮೂಡಿಸುವದು ಪರಿಷತ್ತಿನ ಆಶಯ.
* ಪರಿಷತ್ತಿನ ಆಜೀವ ಸದಸ್ಯತ್ವ ಶುಲ್ಕ ೩೦೦ ರೂ. ನೀವು ಸದಸ್ಯರಾಗಿ ಬೇರೆಯವರನ್ನೂ ಸದಸ್ಯರನ್ನಾಗಿಸಿ, ಪರಿಷತ್ತಿನ ವಾಹಿನಿಯಲ್ಲಿ ಸೇರಿಕೊಳ್ಳಿ.
* "ಮಹಾಮನೆ" ಪರಿಷತ್ತಿನ ಮಾಸಿಕ ಪತ್ರಿಕೆ. ವಾರ್ಷಿಕ ಚಂದಾ ೧೨೦ ರೂ. ಆಜೀವ ಚಂದಾ ೭೦೦ ರೂ. ಹೆಚ್ಚಿನ ಸಂಖ್ಯೆಯಲ್ಲಿ ಚಂದಾದಾರರನ್ನು ಮಾಡಿ. ಶರಣ ಕ್ಷೇತ್ರಗಳ ಪರಿಚಯ, ಆಯ್ದ ವಚನಗಳು ಮತ್ತು ಅವುಗಳ ವಿಶ್ಲೇಷಣೆ, ಶರಣ ಸಾಹಿತ್ಯ ಕುರಿತ ಪ್ರೌಢ ಲೇಖನಗಳು, ಆಧುನಿಕ ವಚನಕಾರರ ಹೊಸ ವಚನಗಳು ಮುಂತಾದವುಗಳನ್ನು "ಮಹಾಮನೆ" ಒಳಗೊಂಡಿರುತ್ತದೆ.
* ಪರಿಷತ್ತಿನ ನಿರಂತರ ಕಾರ್ಯಕ್ರಮಗಳಿಗೆ ದತ್ತಿ ದಾನಿಗಳನ್ನು ಗುರುತಿಸಿ ನೆರವು ಪಡೆಯಿರಿ. ಒಂದು ದತ್ತಿಯ ಕನಿಷ್ಠ ಮೊತ್ತ ರೂ. ೧೦,೦೦೦. ಅದರಿಂದ ಬರುವ ವಾರ್ಷಿಕ ಬಡ್ಡಿ ಹಣದಲ್ಲಿ ನೀವೇ ಕಾರ್ಯಕ್ರಮಗಳನ್ನು ಸಂಘಟಿಸಲು ಸುಲಭವಾಗುವದು.
* ಶಾಲಾ ಕಾಲೇಜುಗಳಲ್ಲಿ, ಮಠ ಮಂದಿರಗಳಲ್ಲಿ ಬೇರೆ ಬೇರೆ ಸಾಂಸ್ಕೃತಿಕ ಸಂಘ ಸಂಸ್ಥೆಗಳ ಸಹಯೋಗದೊಂದಿಗೆ ಹಾಗೂ ಪ್ರಾಯೋಜಕರಿಂದ ಕಾರ್ಯಕ್ರಮಗಳನ್ನು ಸಂಘಟಿಸಿ.
* ನಿಮ್ಮ ಅಧಿಕಾರದ ಅವಧಿಯಲ್ಲಿ ಕನಿಷ್ಠ ಒಂದಾದರೂ ತಾಲ್ಲೂಕು ಅಥವಾ ಜಿಲ್ಲಾ ಸಮಾವೇಶಗಳನ್ನು ಸಂಘಟಿಸಿ.
* ವಚನ ಚಿಂತನ-ಮಂಥನ, ಗೃಹಗೋಷ್ಠಿ, ವಚನಗಾಯನ ಸ್ಪರ್ಧೆ, ಉಪನ್ಯಾಸ, ಶರಣ-ಶರಣೆಯರ ಜಯಂತಿಗಳ ಆಚರಣೆ, ಸಂವಾದ, ದತ್ತಿ ಕಾರ್ಯಕ್ರಮಗಳನ್ನು ಸಂಘಟಿಸಿ. ಯಾವುದೇ ಕಾರ್ಯಕ್ರಮದ ಕಾಲಾವಧಿ ಒಂದೂವರೆ ಗಂಟೆ, ಗರಿಷ್ಠ ಎರಡು ಗಂಟೆ ಮೀರದಿರಲಿ. ಕಾರ್ಯಕ್ರಮವನ್ನು ನಿಗದಿತ ಅವಧಿಯಲ್ಲಿ ಆರಂಭಿಸಿ, ಮುಗಿಸುವದು. ಹಿತಮಿತ ಮಾತುಗಳು ಪರಿಣಾಮಕಾರಿ. ನಿಮ್ಮ ಸರಳ ಹಾಗೂ ಅರ್ಥಪೂರ್ಣ ಕಾರ್ಯಕ್ರಮ ಬೇರೆ ಸಂಘಟನೆಗಳಿಗೆ ಮಾದರಿಯಾಗಿರಲಿ. **ಕಾರ್ಯಕ್ರಮದಲ್ಲಿ ಯಾರಿಗೂ ಮಾಲಾರ್ಪಣೆ ಬೇಡ. ಬದಲಾಗಿ ಶರಣ ಸಾಹಿತ್ಯ ಗ್ರಂಥಗಳನ್ನು ನೀಡಬಹುದು.**
* ನೀವು ಸಂಘಟಿಸುವ ಕಾರ್ಯಕ್ರಮಗಳ ವರದಿ, ಫೋಟೋ ಜಿಲ್ಲಾ ಘಟಕಕ್ಕೆ ಹಾಗೂ "ಮಹಾಮನೆ"ಗೆ ಕಳಿಸಿ.
* ಶರಣ ಸಾಹಿತ್ಯ ಪರಿಷತ್ತು ಮತ್ತು ಕದಳಿ ವೇದಿಕೆಗಳ ಗ್ರಾಮ ಘಟಕಗಳನ್ನು ಸ್ಥಾಪಿಸಿ.
* ತಾಲ್ಲೂಕು ಘಟಕಗಳ ಪದಾಧಿಕಾರಿಗಳ ಪಟ್ಟಿ ನಿಮ್ಮಲ್ಲಿರಲಿ; ಜಿಲ್ಲಾ ಘಟಕಕ್ಕೊಂದು ಪ್ರತಿ ಕಳಿಸಿ.
* ಕಾರ್ಯಕ್ರಮಗಳ ಪ್ರಕಟಿತ ಪತ್ರಿಕಾ ವರದಿಗಳ ಫೈಲ್ ಹಾಗೂ ಫೋಟೋ ಅಲ್ಬಮ್, ಮುಖ್ಯವಾಗಿ ನಿಮ್ಮ ಘಟಕದ ಲೆಕ್ಕಪತ್ರಗಳ ದಾಖಲೆ ಇಟ್ಟುಕೊಳ್ಳಿ.
* ಮದುವೆ, ಹುಟ್ಟುಹಬ್ಬ, ವಿವಾಹ, ವಾರ್ಷಿಕೋತ್ಸವ ಸಂದರ್ಭಗಳ ಸದುಪಯೋಗ ಮಾಡಿಕೊಂಡು ಪರಿಷತ್ತು/ಕದಳಿ ವೇದಿಕೆ ವತಿಯಿಂದ ಉಚಿತವಾದ ಕಾರ್ಯಕ್ರಮಗಳನ್ನು ಸಂಘಟಿಸಿ.
* ಆರೋಗ್ಯಕರ ಟೀಕೆ, ಸಲಹೆಗಳನ್ನು ಸ್ವೀಕರಿಸೋಣ. ಯಾರೊಂದಿಗೂ ವಿರಸ ಬೇಡ. ನಮ್ಮ ಧ್ಯೇಯೋದ್ದೇಶಗಳನ್ನು ಪ್ರಾಮಾಣಿಕವಾಗಿ ಅನುಷ್ಠಾನಗೊಳಿಸೋಣ.

ಬಸಮ್ಮ ಹಳಕೊಪ್ಪ
ಅಧ್ಯಕ್ಷರು, ಜಿಲ್ಲಾ ಮಹಿಳಾ ವೇದಿಕೆ

ಹನುಮಂತಗೌಡ ಗೊಲ್ಲರ
ಅಧ್ಯಕ್ಷರು, ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು







# ದಾಸಿಮಯ್ಯನ ಹಿತನುಡಿ-ನಡೆ

ಆದ್ಯ ವಚನಕಾರನೆಂದು ಗುರುತಿಸಲ್ಪಟ್ಟಿರುವ ಜೇಡರ ದಾಸಿಮಯ್ಯ ನುಡಿದಂತೆಯೇ ನಡೆದ ಶರಣ. ನುಡಿಗೂ ನಡೆಗೂ ಭೇದ ತೋರುವ ಬಗ್ಗೆ ದಾಸಿಮಯ್ಯನ ವಿರೋಧವಿದೆ. ಆಡುವುದೊಂದು ಆಚರಣೆ ಇನ್ನೊಂದು ಇರುವವರನ್ನು ಶ್ರೀಗಂಧ ಲೇಪಿಸಿಕೊಂಡ ಹಂದಿಗೆ ಹೋಲಿಸಿದ್ದಾನೆ. ಕೇವಲ ಬಾಹ್ಯ ವೇಷ ಭೂಷಣಕ್ಕೆ ಮರ್ಯಾದೆ ಕೊಡುವುದು ಸರಿಯಲ್ಲ ಎಂದಿದ್ದಾನೆ. ಅಹಿಂಸೆ, ಪ್ರೀತಿ, ಮಿತ್ರತ್ವ, ಸಭ್ಯವರ್ತನೆ ಮುಂತಾದ ಒಳ್ಳೆಯ ಗುಣಗಳನ್ನು ಅಳವಡಿಸಿಕೊಳ್ಳಲು ಸಲಹೆ ಮಾಡಿದ್ದಾನೆ.

**ಹಿರಿಯ-ಕಿರಿಯ :** ಹಿರಿಯ-ಕಿರಿಯದಕ್ಕೆ ವಯಸ್ಸು ಕಾರಣವಲ್ಲ. ವ್ಯಕ್ತಿಯ ನಡೆ ನುಡಿಗಳೇ ಕಾರಣ. ಉತ್ತಮ ನಡೆ-ನುಡಿಯುಳ್ಳವರು ಯಾರಾದರೇನು ಎಷ್ಟು ಚಿಕ್ಕ ವಯಸ್ಸಿನವರಾದರೂ ಅವರೇ ದಿಟವಾದ ಹಿರಿಯರು. ದಾಸಿಮಯ್ಯ ಇಂತಹ ವೈಚಾರಿಕ ತತ್ವವನ್ನು ಎತ್ತಿ ಹಿಡಿದು ಆಚರಣೆಯಲ್ಲಿ ತಂದ ಮೊದಲಿಗ.

**ಗುರು-ಶಿಷ್ಯ :** ಗುರು-ಶಿಷ್ಯರಲ್ಲಿ ಜ್ಞಾನ ಗಳಿಸುವ ಕೊಡು ತೆಗೆದುಕೊಳ್ಳುವ ಗುಣವಿರಬೇಕು. ಗುರು ಜ್ಞಾನಮಯಿಯಾಗಿದ್ದು ಅರಿತ ಜ್ಞಾನವನ್ನು-ವಿಚಾರವನ್ನು ಇತರರಿಗೆ ಅರುಹಬೇಕು. ಶಿಷ್ಯ ವಿನಯಶೀಲನಾಗಿದ್ದು ಆಸಕ್ತಿಯಿಂದ ಗುರು ಅರಿತ ಜ್ಞಾನವನ್ನು ತಾನರಿಯಬೇಕು. ತಾನೂ ಜ್ಞಾನಿಯಾಗಬೇಕು. ಜ್ಞಾನ ನಿಂತ ನೀರಾಗದೇ ಅದು ಮನಸ್ಸಿನಿಂದ ಮನಸ್ಸಿಗೆ ಹರಿಯುತ್ತಿರಬೇಕು. ಹರಿಯುವಾಗ ಕೊಳೆಯನ್ನು ದಡಕ್ಕೆ ತಳ್ಳಿ ತಿಳಿಯಾಗುತ್ತ ಸಾಗಬೇಕು.

**ಅನುಭಾವ :** ಅನುಭಾವವೇ ತನುವಿಂಗೆ ಆಧಾರವೆಂದ ದಾಸಿಮಯ್ಯ, ಅನುಭಾವವಿಲ್ಲದೇ ಯಾವುದನ್ನೂ ಮಾಡಕೂಡ ದೆಂದಿದ್ದಾನೆ. ಶರೀರಕ್ಕೆ ರಕ್ತವು ಎಷ್ಟು ಅವಶ್ಯವೋ ಅನುಭಾವವೂ ಅಷ್ಟೇ ಅವಶ್ಯ. ಅದಿಲ್ಲದ ದೇಹ ದುರ್ಬಲವಾಗಿರುತ್ತದೆ. ಬದುಕಿನಲ್ಲಿ ಹೆಜ್ಜೆ ಹೆಜ್ಜೆಗೂ ಸೋಲಬೇಕಾಗುತ್ತದೆ. ನಾವು ಬಲಶಾಲಿಗಳೂ ಜಯಶಾಲಿಗಳೂ ಆಗಬೇಕಾದರೆ ಎಲ್ಲದರಲ್ಲಿಯೂ ಅನುಭಾವ ಪಡೆಯಬೇಕು. ಅನುಭಾವ ತಾನಾಗಿಯೇ ಬಾರದು. ಅನುಭಾವಿಗಳ ಸಂಗದಲ್ಲಿದ್ದು, ಅನುಭಾವಿಗಳ ಹಿತನುಡಿ ಆಲಿಸಿ, ಓದಿ ತಿಳಿದು ನಾವೂ ಅನುಭಾವಿಗಳಾಗಬೇಕು.

**ಹಸಿವು :** ಹಾವಿನ ವಿಷಕ್ಕಿಂತ ಹಸಿವು ಕೆಟ್ಟದೆಂಬುದು ದಾಸಿಮಯ್ಯನ ತಿಳುವಳಿಕೆ. ಹಾವು ಕಚ್ಚಿದರೆ ಬದುಕಬಹುದು; ಹಸಿವು ಕಚ್ಚಿದರೆ ಬಾಳಲಾರರು. ಹಾವು ಎಲ್ಲೋ ಒಬ್ಬಿಬ್ಬರನ್ನು ಕಚ್ಚಿದರೆ ಹಸಿವು ಕಚ್ಚದವರಾರು? ಅಂತೆಯೇ ಹಾವಿನ ವಿಷ ಇಳಿಸುವವನಿಗಿಂತ ಹಸಿವಿಗನ್ನವನಿಕ್ಕಿ ಆಪಾದ ಮಸ್ತಕಕ್ಕೆ ಏರಿದ ವಿಷ ಇಳಿಸುವವನೇ ನಿಜ ಗಾರುಡಿಗ. ಆದ್ದರಿಂದಲೇ ಈ ಹಸಿವು ಹಿಂಗಿಸಬಲ್ಲ, ಅನ್ನದ ಕೊರತೆ ನೀಗಿಸಬಲ್ಲ ವಿದ್ಯೆ-ಉದ್ಯೋಗಕ್ಕೆ ಮೊದಲ ಸ್ಥಾನ ಕೊಡಬೇಕೆಂಬುದು ದಾಸಿಮಯ್ಯನ ನಿಲುವು.

**ಸಂಪಾದನೆ :** ಕಳ್ಳ ಸಂಪಾದನೆಯಿಂದ ಯಾರಿಗೂ ಎಂದಿಗೂ ಒಳ್ಳೆಯದಾಗುವುದಿಲ್ಲ. ವಾಮ ಮಾರ್ಗದಿಂದ ಬಂದ ಸಂಪಾದನೆ ನಿಲ್ಲುವುದೇ ಇಲ್ಲ. ನೆಮ್ಮದಿಯೂ ಉಳಿಯುವುದಿಲ್ಲ. ಸಮಾಜದಲ್ಲಿ ಈ ಮಾರ್ಗದಿಂದ ಹಣ ಸಂಪಾದಿಸುವವರು ಬೆಲೆ ಕಳೆದುಕೊಳ್ಳುತ್ತಾರೆ.

ತನಗೆಂದು ತನ್ನವರಿಗೆಂದು ಕೂಡಿಸುವ ಸ್ವಾರ್ಥಕ್ಕೆ ಮನಸ್ಸು ಮಾಡದೇ ಸತ್ಯ ನಿಷ್ಠ ಕಾಯಕದಿಂದ ಸಂಪಾದಿಸಿ ಸರಳ ಬದುಕಿಗೆ ಸಾಕಷ್ಟು ಇಟ್ಟುಕೊಂಡು ಉಳಿದುದನ್ನು ಹಂಚಬೇಕೆಂಬುದನ್ನು, ತನ್ನ ದಾಸೋಹದ ಗುಣದಿಂದ ದಾಸಿಮಯ್ಯ ತಿಳಿಸಿಕೊಟ್ಟಿದ್ದಾನೆ.

**ಸಮತೆ :** ಜಾತಿ-ಮತ- ಪಂಥಗಳ ವಿಷಯದಲ್ಲಿ ಜನರು ಬಡವರಾಗಿದ್ದಾರೆ. ತೊಟ್ಟ ಜನಿವಾರ, ಹಿಡಿದ ರೆಂಪಿಗೆಗಳಿಗೆ ಪ್ರಾಣ ಉಂಟೆ? ಮಾನವರೆಲ್ಲರ ಪ್ರಾಣ ಒಂದೇ. ಯಾರ ಪ್ರಾಣಕ್ಕೂ ಬೇರೆ ಬೇರೆ ಕುರುಹಿಲ್ಲ. ಆದ್ದರಿಂದ ಜಾತಿ ಭೇದ ಸಲ್ಲದು. ಇದೇ ರೀತಿ ಹೆಣ್ಣು-ಗಂಡು, ಅನ್ನ-ಅರ್ಥದಲ್ಲಿಯೂ ಸಾಮ್ಯತೆ ಇರಬೇಕು. ಇಲ್ಲವಾದಲ್ಲಿ ಸಮಾಜದಲ್ಲಿ ಹದುಳ ಹುಟ್ಟದು, ಸಮತೆ ಸಮನಿಸದು ಎಂದು ದಾಸಿಮಯ್ಯ ಸಾವಿರ ವರ್ಷಗಳ ಹಿಂದೆಯೇ ಸಾರಿದ್ದಾನೆ.

-ನಿಂಗು ಸೊಲಗಿ, ಮುಂಡರಗಿ, ಗದಗ ಜಿಲ್ಲೆ

**ಹೋಗಲೇಬೇಕಲ್ಲ!**

ಬಂದವರು ಒಂದು ದಿನ ಮರಳಿ ಹೋಗಲೇಬೇಕಲ್ಲ
ಅರಿಯದಿದ್ದರು ದಾರಿ ಹೊರಳಿ ಹೋಗಲೇಬೇಕಲ್ಲ!
ಕರೆದು ತಂದವರು ಯಾರೊ ಜೊತೆಗೆ ಇದ್ದವರು ಯಾರೊ
ಲೆಕ್ಕ ಮುಗಿಯುವುದಿಲ್ಲ ಉರುಳಿ ಹೋಗಲೇಬೇಕಲ್ಲ!
ಕರುಳು ಎದೆ ಮನೆ ಮಠ ಎತ್ತರದ ಗೋಡೆ ಕಟ್ಟಿದರೂ
ಗಂಟೆ ಬಾರಿಸಿದೊಡನೆ ನುಸುಳಿ ಹೋಗಲೇಬೇಕಲ್ಲ!
ಚುಕ್ಕೆ ಚಂದ್ರ ಗಾಳಿ ನೇಸರುಗಳ ಸ್ನೇಹ ಮುಗಿದಾಗ
ತೆರೆದು ತಿರೆ-ಬಾನುಗಳ ಅಗಳಿ ಹೋಗಲೇಬೇಕಲ್ಲ!
ಅಲ್ಲಿ ಇಲ್ಲಿ ಎಂಬ ಗೊಡವೆ ಅಡಗಿದಾಕ್ಷಣವೆ 'ಅರಸ'
ಬಿಟ್ಟಿ ಕಾಯ ಜೀವದ ಸುರುಳಿ ಹೋಗಲೇಬೇಕಲ್ಲ!

-ಶಾಂತರಸ, (ಕೃಪೆ : ಗಜ್ಜಲ್ ಮತ್ತು ಬಿಡಿ ದ್ವಿಪದಿ)



# ಶರಣರು ಮತ್ತು ಶರಣ ಸಾಹಿತ್ಯದ ಹಿನ್ನೆಲೆ

-ಬಿ. ಶೇಖರಪ್ಪ ಹುಲಿಗೇರಿ, ರಾಯಚೂರು

ಕನ್ನಡ ನಾಡಿನ ಚರಿತ್ರೆಯಲ್ಲಿ ಹನ್ನೆರಡನೇ ಶತಮಾನ ಅವಿಸ್ಮರಣೀಯ ಕಾಲ. ಸಮಾಜ ಸುಧಾರಕ, ಭಕ್ತಿ ಭಂಡಾರಿ, ದಾರ್ಶನಿಕ, ಬಸವಣ್ಣನವರ ಸಂಚಾಲಕತ್ವದಲ್ಲಿ ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಆಗ ನಡೆದ ಕ್ರಾಂತಿ ಅದ್ಭುತ. ಸಕಲ ಜೀವರಾಶಿಗಳಿಗೆ ಲೇಸನೇ ಬಯಸಿದ ಶರಣ ಸಮುದಾಯವೇ ಈ ಮಹಾಕ್ರಾಂತಿಯಲ್ಲಿ ಪ್ರಮುಖ ಪಾತ್ರವಹಿಸಿದ್ದನ್ನು ಕಾಣುತ್ತೇವೆ. ಅಂದಿನ ಶರಣರ ವಿಚಾರಧಾರೆ ಇಂದಿನ ದಿನಕ್ಕೂ ಪ್ರಸ್ತುತವೆನ್ನುವುದಕ್ಕೆ ಅವರು ಕೊಟ್ಟ ಕೊಡುಗೆ ಶರಣ ಸಾಹಿತ್ಯವೇ ಸಾಕ್ಷಿಯಾಗಿದೆ. ಅವರು ನಡೆದು ತೋರಿದ ದಾರಿಯೇ ನಮಗೆ ದಾರಿದೀಪವಾಗಿದೆ.

ಶರಣ ಎಂದರೆ ದೈವದಲ್ಲಿ, ಧ್ಯೇಯದಲ್ಲಿ, ಆದರ್ಶದಲ್ಲಿ ತನ್ನನ್ನು ತಾನು ಒಪ್ಪಿಸಿಕೊಂಡವನು. ಅರಿಯದೇ ಆಚರಿಸುವ ಶಾಸ್ತ್ರಮೂಢನಲ್ಲ. ಹಾಗೆಂದೇ 'ನಿಮ್ಮ ಶರಣರು ಆಚರಿಸುವ ಆಚರಣೆಯ ಕಂಡು ಕಣ್ದೆರೆದೆನಯ್ಯ' ಎನ್ನುತ್ತಾರೆ ಬಸವಣ್ಣನವರು.

ಶರಣ ಒಬ್ಬ Enlightened Soul. ದೊಡ್ಡ ಧ್ಯೇಯವನ್ನಿಟ್ಟುಕೊಂಡು ಬದುಕಿ, ಆ ಹಿನ್ನೆಲೆಯಲ್ಲಿ ಅವರು ವ್ಯಕ್ತಪಡಿಸಿದ ಭಾವನೆಗಳು, ನಡೆದುಕೊಂಡ ನಡೆ, ರಚಿಸಿದ ಕೃತಿಗಳ ಸಮೂಹವೇ ಶರಣ ಸಾಹಿತ್ಯ. ಸತ್ಯವನ್ನು ಕಾಣುವ, ಕಾಣಿಸುವ ತಮ್ಮನ್ನು ತಾವು ತಿದ್ದಿಕೊಂಡು, ಇತರರನ್ನು ತಿದ್ದುವ ಉದ್ದೇಶ ಹೊಂದಿದ ಶರಣರಲ್ಲಿ ವೈಯಕ್ತಿಕ ಈರ್ಷೆ ದ್ವೇಷ ನಿಂದನೆಗೆ ಅವಕಾಶವೇ ಇಲ್ಲ. ಇಂಥ ವಿಚಾರಗಳ ಅಭಿವ್ಯಕ್ತಿಯೇ ವಚನ ಸಾಹಿತ್ಯ. ಅದು ಶರಣರ ಚಳುವಳಿಯ ಮಾಧ್ಯಮವೂ ಹೌದು.

ಶರಣ ಸಾಹಿತ್ಯ ಕೇವಲ ವೀರಶೈವರ ಸಾಹಿತ್ಯವಲ್ಲ ಎಂಬುದನ್ನು ಮರೆಯಬಾರದು. ಎಲ್ಲ ಜನರ-ಶರಣರ ಬಳುವಳಿಯೇ ಶರಣ ಸಾಹಿತ್ಯ. ಶರಣರು ಮೂಲತಃ ಸಾಧಕರು, ಅವರು ಸಾಹಿತಿಗಳಾಗಬೇಕೆಂದು ಬಯಸಿದವರಲ್ಲ. ಅವರು ಅನುಭಾವಿಗಳು. ಆತ್ಮಾನುಸಂಧಾನವೇ ಅವರ ಗುರಿಯಾಗಿತ್ತು. ಅದರ ಅಂಗವಾಗಿ ಅನಿವಾರ್ಯವೆಂಬಂತೆ ಸಾಹಿತ್ಯ ಸೃಷ್ಟಿಯಾದದ್ದು. ದಲಿತರನ್ನು ದುಃಖಿಗಳನ್ನು ತನ್ನವರೆಂದು ಅಪ್ಪಿಕೊಂಡು ಮಾತಿಲ್ಲದ ಅವರಿಗೆ ಮಾತು ಕೊಟ್ಟ, ಸಮಾಜದ ಹುಳುಕನ್ನು ತಿದ್ದುವ, ದಿಟ್ಟತನದಿಂದ ಹೋರಾಡುವ, ಸತ್ಯ ಸ್ವರೂಪದ ಸಾಕ್ಷಾತ್ಕಾರವನ್ನು ಪಡೆಯುವ ಅಂತರ ದೃಷ್ಟಿ ಮತ್ತು ಕವಿ ಹೃದಯದ ಭಾವನೆಗಳಿಗೆ ಅಭಿವ್ಯಕ್ತಿಯಾಗಿ ಹುಟ್ಟಿದ ಕಾವ್ಯ ಶಕ್ತಿಯೇ ಶರಣಸಾಹಿತ್ಯ. ಶರಣ ಸಾಹಿತ್ಯ ಉದಯವಾದದ್ದು ಸಮಷ್ಟಿಕಲ್ಯಾಣದ ದೃಷ್ಟಿಯಿಂದ ಎಂಬುದನ್ನು ಯಾರೂ ಮರೆಯುವಂತಿಲ್ಲ.

ಶರಣರು ಹೊಸ ವಿಚಾರಗಳ ಪ್ರಣಾಳಿಕೆಯೊಂದನ್ನು ಹುಟ್ಟುಹಾಕಿ, ಲಿಂಗವನ್ನು ಸಮಾನತೆಯ ಕುರುಹಾಗಿ ಬಳಸಿ, ತಮ್ಮ ಚಿಂತನೆಯನ್ನು ವಚನಗಳ ಮೂಲಕ ಹೊಮ್ಮಿಸಿ, ಧಾರ್ಮಿಕ ನೆಲೆಯ ಮೇಲೆ ನಿಂತು ಧಾರ್ಮಿಕ, ಆರ್ಥಿಕ, ಸಾಮಾಜಿಕ ಪ್ರತಿಭಟನೆಯನ್ನು ಮಾಡಿದ್ದು ಚರಿತ್ರೆ ಕಂಡ ಮಹತ್ವದ ಸಂಗತಿ. ಈ ಪ್ರತಿಭಟನೆಯ ಸಾಹಿತ್ಯ ರಚನೆಗೆ ಜನಭಾಷೆಯಾದ ಕನ್ನಡವನ್ನು ತಮ್ಮ ಮಾರ್ಗದ ಮಾಧ್ಯಮವಾಗಿ, ವ್ಯಾಪಕವಾಗಿ ಬಳಸಿದ್ದರಿಂದ ನೂರಾರು ಜನ ಶರಣ-ಶರಣೆಯರು ಮೊಟ್ಟಮೊದಲ ಬಾರಿಗೆ ತಮ್ಮ ಭಾವನೆಗಳನ್ನು ಬಿತ್ತರಿಸಲು ಸಾಧ್ಯವಾಯಿತು. "ದೇವವಾಣಿ ಜನವಾಣಿಯಾಗಲು ಸಾಧ್ಯವಾಗದೆ ಹೋದಾಗ, ಜನವಾಣಿಯನ್ನೇ ದೇವವಾಣಿ ಎತ್ತರಕ್ಕೇರಿಸಿದ ಪವಾಡ ಶರಣರದು." ಎಂಬ ಶಿ.ಶಿ. ಬಸವನಾಳರ ಮಾತು ಉಲ್ಲೇಖಾರ್ಹ.

**ಶರಣ ಸಾಹಿತ್ಯ ಕಮ್ಮಟ-ಅನುಭವ ಮಂಟಪ** : ಅನುಭವ ಮಂಟಪ ಮಾನವ ಧರ್ಮದ ವಿಕಾಸದ ಇತಿಹಾಸದಲ್ಲಿ ಒಂದು ಅಪೂರ್ವ ಮತ್ತು ವಿಶಿಷ್ಟ ಕೊಡುಗೆಯಾಗಿದೆ. ಸಾಮಾಜಿಕ ಪರಿವರ್ತನೆ, ಧಾರ್ಮಿಕ ಸಮಾನತೆ, ಆಧ್ಯಾತ್ಮಿಕ ಅನುಭವಗಳ ಅಭಿವ್ಯಕ್ತಿ ವೇದಿಕೆ ಈ ಅನುಭವ ಮಂಟಪ. ಅದರ ಸ್ವರೂಪ, ಕಾರ್ಯಕ್ಷೇತ್ರ, ಕಾರ್ಯವಿಧಾನ. ಸಾಧನೆ ಮತ್ತು ಸಿದ್ಧಿಗಳನ್ನು ಗಮನಿಸಿದಾಗ ಇದು ಸ್ಪಷ್ಟವಾಗುತ್ತದೆ.

೧೨ನೇ ಶತಮಾನದ ಮಧ್ಯಭಾಗದ ಹೊತ್ತಿಗೆ ಚತುರ್ ವರ್ಣಗಳು ವಿರೂಪ ಮಾರ್ಗ ಹೊಂದಿದ್ದವು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳೊಂದಿಗೆ ಅಸ್ಪೃಶ್ಯವೆಂಬ ಪಂಚಮ ವರ್ಣವು ಹುಟ್ಟಿಗೊಂಡು ಹಿಂದೂ ಧರ್ಮ ಹಸಗೆಟ್ಟು ಹೋಗಿತ್ತು. ಕಳಂಕದ ಕಾಳಿಕೆ ಹುರಿಗೊಂಡು ಸಾಂಪ್ರದಾಯಿಕ ಕಬಂಧ ಬಾಹುವಿನಲ್ಲಿ ವೈದಿಕರಲ್ಲದವರನ್ನು ಎಲ್ಲ ರಂಗಗಳಲ್ಲಿ ತುಳಿದು ಹಾಕತೊಡಗಿತ್ತು. ಈ ಸ್ಥಿತಿಯನ್ನು ಹೋಗಲಾಡಿಸುವ, ಹೋರಾಟ ಮಾಡುವ, ದಲಿತರಿಗೆ ಧ್ವನಿಯಾಗಬಲ್ಲ ಒಬ್ಬ ನಾಯಕನಿಗಾಗಿ ಸಾಮಾನ್ಯ ಜನತೆ ಕಾಯುತ್ತಿತ್ತು.

ಬಸವಣ್ಣನವರ ಬರುವಿಕೆ, ಅವರ ನಡೆನುಡಿ, ಸಾಮಾಜಿಕ ಕಳಕಳಿ, ದಲಿತರ ಮೇಲೆ ಅವರಿಗಿದ್ದ ಕಾರುಣ್ಯ, ಲೋಕ ಕಲ್ಯಾಣದ ಗುರಿ, ಯುಗದ ಶಕ್ತಿಯಾಯಿತು. ಬಿಜ್ಜಳನ ರಾಜ್ಯದಲ್ಲಿ ಮಂತ್ರಿಯಾಗಿ, ರಾಜಕೀಯ ಅಧಿಕಾರದೊಂದಿಗೆ ಅಧ್ಯಾತ್ಮಿಕ ಸಾಧನೆಯ ಹಾದಿಯಲ್ಲಿ ತಾವು ನಡೆಯುವುದಲ್ಲದೆ ತಮ್ಮೊಡನೆ ಶರಣರ ತಂಡವನ್ನು ಕಟ್ಟಿಕೊಂಡು ಮುನ್ನಡೆಯಲು ಅನುಭವ ಮಂಟಪ ಮಾರ್ಗದರ್ಶಿಯಾಯಿತು.

ಅನುಭವ ಮಂಟಪದಲ್ಲಿ ವಿವಿಧ ಸಾಮಾಜಿಕ ಸ್ತರಗಳಿಂದ ವಿವಿಧ ಕಾಯಕಗಳನ್ನು ಪ್ರತಿನಿಧಿಸುತ್ತಿದ್ದ ಶರಣರು ಮೇಲು-ಕೀಳು ಎಂಬ





ಭಾವನೆಗಳಿಲ್ಲದೆ ಸರಿ ಸಮಾನ ಸ್ಥಾನ ಮಾನಗಳಲ್ಲಿ ಕುಳಿತು ಚಿಂತನ ಮಂಥನ ಮಾಡುತ್ತಿದ್ದರು. ಯಾವ ತಾರತಮ್ಯವಿಲ್ಲದೆ ಸ್ತ್ರೀ ಪುರುಷ ಸಮಾನ ಭಾವದಿಂದ ಆಧ್ಯಾತ್ಮಿಕ, ಸಾಮಾಜಿಕ, ಧಾರ್ಮಿಕ ಮಾರ್ಗಗಳನ್ನು ಚರ್ಚಿಸುತ್ತಿದ್ದರು. ವ್ಯಕ್ತಪಡಿಸುತ್ತಿದ್ದರು. ಸಮಸ್ಯೆಗೆ ಪರಿಹಾರ ಸೂಚಿಸುತ್ತಿದ್ದರು. ಪಡೆಯುತ್ತಿದ್ದರು. ಶರಣ ಪರಸ್ಪರ ವಿಚಾರ ಮಂಥನವೇ ಅನುಭಾವವಾಗುತ್ತಿತ್ತು. ಅದರ ಅಭಿವ್ಯಕ್ತಿಯೇ ವಚನ ಆಗುತ್ತಿತ್ತು. ಈ ಸಾಹಿತ್ಯ ಸಂಗ್ರಹಿಸಲು ಶರಣ ವಚನ ಭಂಡಾರಿ ಶಾಂತರಸರನ್ನು ನೇಮಿಸಲಾಗಿತ್ತು. ಈ ಅನುಭವ ಮಂಟಪದ ಅಗ್ರ ಪೀಠದ ನಾಯಕರೇ ಅಲ್ಲಮಪ್ರಭು. ಈ ಪೀಠವನ್ನು 'ಶೂನ್ಯ ಸಿಂಹಾಸನ'ವೆಂದು ಕರೆಯಲಾಗಿತ್ತು.

ಬಸವಣ್ಣನವರ ಈ ಕಾರ್ಯ, ಅವರ ವ್ಯಕ್ತಿತ್ವ, ಅನೇಕರನ್ನು ಆಕರ್ಷಿಸಿತು. ದೇಶ ವಿದೇಶಗಳಿಂದ ಬೇರೆ ಬೇರೆ ರಾಜ್ಯಗಳಿಂದ ಶರಣರು ಬಂದರು. ಎಲ್ಲರೂ ಸರ್ವ ಸಮಾನ ಸ್ಥಾನದಲ್ಲಿ ಕುಳಿತು ಚರ್ಚಿಸಿದರು. ಮಡಿವಾಳ ಮಾಚಯ್ಯ, ಮೇದಾರ ಕೇತಯ್ಯ, ಅಂಬಿಗರ ಚೌಡಯ್ಯ, ಹಡಪದ ಅಪ್ಪಣ್ಣ, ಡಕ್ಕೆ ಬೊಮ್ಮಣ್ಣ, ತುರುಗಾಯಿ ರಾಮಣ್ಣ, ಸುಂಕದ ಬಂಕಣ್ಣ, ಕಿನ್ನರಿ ಬೊಮ್ಮಣ್ಣ, (ಅಕ್ಕಸಾಲಿ) ಒಕ್ಕಲು ಮುದ್ದಯ್ಯ, ಗಾಣದ ಕನ್ನಪ್ಪ, ವೈದ್ಯ ಸಂಗಣ್ಣ, ಕಿರಾತ ಸಂಗಯ್ಯ, ನುಲಿ ಚಂದಯ್ಯ, ಸೂಜಿ ಕಾಯಕದ ರಾಮಿ ತಂದೆ, ಬಾಚಿ ಕಾಯಕದ ಬಸಪ್ಪ, ನೆತ್ತಿಗೆ ಕಾಯಕದ ರಾಮಿತಂದೆ, ಕನ್ನಡಿ ಕಾಯಕದ ಅಮ್ಮಿದೇವಯ್ಯ, ಕದಿರ ಕಾಯಕದ ರೆಮ್ಮವ್ವ, ಕೊಟ್ಟಣದ ರೆಮ್ಮವ್ವೆ, ಇತರ ಶರಣರಲ್ಲದೆ ಪಾಂಡ್ಯ-ಚೋಳ, ಚೇರ, ಗುರ್ಜಾರ, ಓರಿಸಾ, ಕಾಶ್ಮೀರ ಮೊದಲಾದ ರಾಜ್ಯಗಳಿಂದ ಸಾಧಕರು ಕಲ್ಯಾಣಕ್ಕೆ ಬಂದು ಅನುಭವ ಮಂಟಪದಲ್ಲಿ ಭಾಗವಹಿಸಿದರು.

ದಕ್ಷಿಣದ ಸಕಲೇಶ ಮಾದರಸ, ಗುಜರಾತಿನ ಆದಯ್ಯ, ಕಳಿಂಗದ ಮರುಳ ಶಂಕರದೇವ, ಆಂಧ್ರದ ಮೈದುನ ರಾಮಯ್ಯ ಹೀಗೆ ಹಲವಾರು ಸಾಧಕರು ಶರಣರಾದರು. ಅನುಭವ ಮಂಟಪದ ಸದಸ್ಯರಾದರು. ಅನುಭವ ಮಂಟಪವೆಂದರೆ ನಾಲ್ಕು ಗೋಡೆಗಳ ಕಟ್ಟಡವಲ್ಲ. ಉತ್ತಂಗಿ ಚೆನ್ನಪ್ಪನವರು ಸಂಶೋಧಿಸಿ ಹೇಳಿದಂತೆ 'ಅದೊಂದು ಅನುಭವ ವಿನಿಮಯಕ್ಕಾಗಿ ಶಿವಾನುಭವಿಗಳು ಯಾವ ಸ್ಥಳದಲ್ಲಿ ಸಭೆಯಾಗಿ ಕುಳಿತುಕೊಳ್ಳುವರೋ, ಕುಳಿತು ಚರ್ಚಿಸುವರೋ, ಚಿಂತನ ಮಂಥನಗೈಯುವರೋ, ಮಾರ್ಗದರ್ಶನ ನೀಡುವರೋ ಆ ಸ್ಥಳವೇ ಅನುಭವ ಮಂಟಪ.'

ಜಾತಿ ಭೇದದಿಂದ ಮೂಢನಂಬಿಕೆಗಳಿಂದ ವೈದಿಕ ಸಂಪ್ರದಾಯದ ದಬ್ಬಾಳಿಕೆಯಿಂದ ನಿರ್ಮಿತವಾದ ಸಾಮಾಜಿಕ ವಿಷಮತೆಯನ್ನು ಹೋಗಲಾಡಿಸಿ ಸಾಮಾಜಿಕರಲ್ಲಿ, ಧಾರ್ಮಿಕರಲ್ಲಿ, ಸರ್ವಸಮಾನತೆ ತರುವಲ್ಲಿ ಅನುಭವ ಮಂಟಪ ಚಾರಿತ್ರಿಕ ಸಾಕ್ಷಿಯಾಗಿದೆ.

ಜಗತ್ತಿನಲ್ಲಿ ಪಾರ್ಲಿಮೆಂಟರಿ ವ್ಯವಸ್ಥೆ ಅಂಕುರಾರ್ಪಣೆಯಾದದ್ದು ೧೩ನೇ ಶತಮಾನದಲ್ಲಿ ಬ್ರಿಟನ್ ದೇಶದಲ್ಲಿ ಎಂದು ಈ ಹಿಂದೆ ಹೇಳಲಾಗುತ್ತಿತ್ತು ಆದರೆ ವಿಚಿತ್ರ ಸತ್ಯವೇನೆಂದರೆ ಅದಕ್ಕೆ ಎರಡುನೂರು ವರ್ಷಗಳ ಹಿಂದೆ ಅಂದರೆ ೧೨ನೇ ಶತಮಾನದಲ್ಲಿಯೇ ಕಲ್ಯಾಣದಲ್ಲಿ ಬಸವಣ್ಣನವರು ಅಂದಿನ ಸಾಮಾಜಿಕ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಆಧ್ಯಾತ್ಮಿಕ ಕ್ಷೇತ್ರಗಳ ಕುರಿತು ಮಹಿಳೆಯರೂ ಸೇರಿದಂತೆ ಶರಣ ಸಮುದಾಯ ಒಗ್ಗೂಡಿ ಆಯಾ ಕ್ಷೇತ್ರಗಳ ಕುರಿತು ಚಿಂತನೆ ಚರ್ಚೆ ಮಾಡುತ್ತಿದ್ದರು. ಅದುವೇ ಅನುಭವ ಮಂಟಪ. ಆದ್ದರಿಂದ ಬಸವಣ್ಣನವರೇ ಪಾರ್ಲಿಮೆಂಟರಿ ವ್ಯವಸ್ಥೆಯ ಜನಕ, ಸಂಸದೀಯ ವ್ಯವಸ್ಥೆಯ ತಂದೆಯೆಂದರೆ ತಪ್ಪಲ್ಲ. ಆದ್ದರಿಂದಲೇ ವಿಶ್ವದ ಪ್ರಥಮ ಪಾರ್ಲಿಮೆಂಟ್ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. (First Parliament) ಲೋಕಸಭೆ, ರಾಜ್ಯಸಭೆ, ವಿಧಾನಸಭೆ, ವಿಧಾನ ಪರಿಷತ್ತುಗಳಿಗಿರುವ ಸಂವಿಧಾನಿಕ ನಿಯಮಗಳಂತೆ ಆಯ್ಕೆಗೊಂಡ ಜನಪ್ರತಿನಿಧಿಗಳಿಗೆ ಈ ಅನುಭವ ಮಂಟಪ ಒಂದು ಆದರ್ಶ ಮಾದರಿ.

○

## ಅಕ್ಕಮಹಾದೇವಿ

ಸುಳಿ ಮಿಂಚೊಂದು ಮಿಂಚಿ ಮರೆಯಾದಂತೆ
ಕಲ್ಯಾಣದ ಮಹಾಜ್ಯೋತಿ ಮರೆಯಾಯಿತ್ತು!
ಕದಳಿಯ ಬನದಲ್ಲಿ ಬಯಲಾದಳು ದೇವಿ.
ಕಣ್ಬೆಳಕು ಕಳೆದಂತೆ ಕಾಣದಾದಳು ಮಹಾದೇವಿ!
ಅಕ್ಕಮಹಾದೇವಿ! ತೇಜನಿನದ!

ಭ್ರಮೆಯ ಮಡುವ ಎಡತಾಕಲಿಲ್ಲವಳು.
ಸುಡುವ ಬಡಬಾಗ್ನಿಯೆಂದರಿತವಳು.
ಐದು ಸುತ್ತಿನ ಕತ್ತಲೆಯ ಕೋಟೆಯೊಳು
ಬೆತ್ತಲೆಯ ಮುಕ್ತಿ ದೀವಿಗೆಯ ಉರಿಸಿದವಳು! ತೇಜನಿನದ!

ಕಾಮುಕನೊಡನೆ ನಡೆದ ಕಲ್ಯಾಣವ
ದಿಕ್ಕರಿಸಿ ದಿಗಂಬರಿಯಾದಳು ಅಕ್ಕ.
ಕಲ್ಯಾಣ ಹೊಕ್ಕು ಸತ್ಯದಾ ನೆಳಲಲ್ಲಿ
ಸೌಖ್ಯದೊಳಿದ್ದಳು ಅಕ್ಕ.
ಕರೆಬರಲು ಕದಳಿಯ ಪೊಕ್ಕು
ಐಕ್ಯವಾದಳು ಅಕ್ಕ! ತೇಜ ನೀನದ!

-ಬಿ.ಎನ್. ತೇಜಸ್ವಿನಿದೇವಿ ಅರಸ್

ಮೈಸೂರು ಜಿಲ್ಲೆ

# ಸಂಸ್ಥಾಪಕರ ಜಯಂತಿ



ಶರಣ-ಶರಣೆಯರ ವೇಷ-ಭೂಷಣ ಸ್ಪರ್ಧೆ

ಜೆ.ಎಸ್.ಎಸ್. ವಿದ್ಯಾಸಂಸ್ಥೆ ಮತ್ತು ಮೈಸೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಸಹಯೋಗದಲ್ಲಿ ಮೈಸೂರು ಜಿಲ್ಲಾ ಹೆಚ್.ಡಿ. ಕೋಟೆ ತಾಲ್ಲೂಕಿನ ಸರಗೂರಿನಲ್ಲಿ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಸಂಸ್ಥಾಪಕರಾದ ಲಿಂಗೈಕ್ಯ ಡಾ. ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರ ೯೦ನೇ ಜಯಂತಿ ಮಹೋತ್ಸವವನ್ನು ವಿಶಿಷ್ಟ ರೀತಿಯಲ್ಲಿ ಆಚರಿಸಲಾಯಿತು.

ಸಮಾರಂಭವನ್ನು ಉದ್ಘಾಟಿಸಿದ ಕರ್ನಾಟಕ ಪೊಲೀಸ್ ಅಕಾಡೆಮಿ ನಿರ್ದೇಶಕರಾದ ಶ್ರೀ ವೈ.ಆರ್. ಪಾಟೀಲ್ ಅವರು ಲಿಂ. ಪೂಜ್ಯ ಶಿವರಾತ್ರಿ ರಾಜೇಂದ್ರ ಸ್ವಾಮಿಗಳು ಬಡವ ಬಲ್ಲಿದ ಎಂಬ ಬೇಧವಿಲ್ಲದೆ ಸರ್ವರಿಗೂ ಅಸನ ವಸತಿ ನೀಡಿದ ಪರಮ ಯೋಗಿಗಳೆಂದು ಹೇಳಿದರು.

ಉಪನ್ಯಾಸ ನೀಡಿದ ಶರಣ ಸಾಹಿತ್ಯ ಪರಿಷತ್ತಿನ ಜಿಲ್ಲಾ ಘಟಕದ ಅಧ್ಯಕ್ಷರಾದ ಡಾ. ಶಿವರಾಜಪ್ಪ ಅವರು ಲಿಂ. ರಾಜೇಂದ್ರ ಮಹಾಸ್ವಾಮಿಗಳು ಸುಮಾರು ಒಂಬತ್ತು ಸಾವಿರಕ್ಕಿಂತಲೂ ಹೆಚ್ಚಿನ ನೌಕರರಿಗೆ ಆಶ್ರಯ ಮತ್ತು ಒಂದು ಲಕ್ಷಕ್ಕೂ ಮಿಗಿಲಾದ ವಿದ್ಯಾರ್ಥಿಗಳಿಗೆ ಜ್ಞಾನಾನ್ನ ದಾಸೋಹವನ್ನು ನೀಡಿದ ಮಹಾ ತ್ಯಾಗಿಗಳೆಂದು ತಿಳಿಸಿದರು.

ಶಿಕ್ಷಕಿ ಎಂ.ಎ. ನೀಲಾಂಬಿಕೆಯವರಿಂದ ರಚಿತವಾದ 'ಶ್ರೀ ಸುತ್ತೂರು ದರ್ಶನ' ಮತ್ತು 'ಸಂಗಮ' ಕೃತಿಗಳನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಉಪನಿರ್ದೇಶಕರಾದ ಶ್ರೀ ಮ.ಗು. ಸದಾನಂದಯ್ಯವರು ಬಿಡುಗಡೆ ಮಾಡಿದರು.

ಅಧ್ಯಕ್ಷತೆ ವಹಿಸಿ ಮಾತನಾಡಿದ ಪ್ರಸಿದ್ಧ ವೈದ್ಯರೂ, ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷರೂ ಆದ ಡಾ. ಸಿ.ಎನ್. ಮೃತ್ಯುಂಜಯಪ್ಪನವರು ಮಾತನಾಡಿ ವಿದ್ಯಾರ್ಥಿಗಳು ಶ್ರದ್ಧೆಯಿಂದ ಓದುವ ಉತ್ತಮ ಅಭ್ಯಾಸ ರೂಢಿಸಿಕೊಳ್ಳಬೇಕು ಎಂದು ಹೇಳಿದರು.

ದಡದ ಹಳ್ಳಿ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಷಡಕ್ಷರ ಸ್ವಾಮಿಗಳು ಸಾನ್ನಿಧ್ಯ ವಹಿಸಿದ್ದರು. ಮಧ್ಯಾಹ್ನ ನಡೆದ ಆಧುನಿಕ ವಚನ ಕವಿಗೋಷ್ಠಿಯ ಅಧ್ಯಕ್ಷತೆಯನ್ನು ಪ್ರಸಿದ್ಧ ಕವಿಗಳಾದ ಡಾ. ಸಿ.ಪಿ.ಕೆ. ಅವರು ವಹಿಸಿದ್ದರು. ಈ ಗೋಷ್ಠಿಯಲ್ಲಿ ಸುಮಾರು ೨೫ ವಚನಕಾರರು ಭಾಗವಹಿಸಿದ್ದರು. ವಚನಗಾಯನವನ್ನು ಶ್ರೀಮತಿ ಸುಧಾ ಮೃತ್ಯುಂಜಯಪ್ಪ ಮತ್ತು ಸುಗಂಧಮ್ಮ ಜಯಪ್ಪನವರು ನಡೆಸಿಕೊಟ್ಟರು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಚಿಗುರು ಕಾರ್ಯಕ್ರಮದಡಿ ವಿವಿಧ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು, ಇದರಲ್ಲಿ ಶರಣ ಶರಣೆಯರ ವೇಷ ಭೂಷಣಗಳ ಸ್ಪರ್ಧೆ ನೆರೆದಿದ್ದ ಎಲ್ಲರಿಗೂ ಅನುಭವ ಮಂಟಪದ ನೆನಪನ್ನು ತರುವಂತಿತ್ತು. ವಿಜೇತರೆಲ್ಲರಿಗೂ ಬಹುಮಾನ ನೀಡಲಾಯಿತು.

ಸ್ವಾಗತವನ್ನು ಶ್ರೀ ಟಿ.ಎಸ್. ತೋಟಪ್ಪ, ವಂದನಾರ್ಪಣೆಯನ್ನು ಶ್ರೀ ಉಮೇಶ್ ಮತ್ತು ಕಾರ್ಯಕ್ರಮದ ನಿರೂಪಣೆಯನ್ನು ಶ್ರೀ ಮಹಮದ್ ಅಜುಂಪಾಷಾ ಮತ್ತು ಪ್ರಾರ್ಥನೆಯನ್ನು ಶ್ರೀಮತಿ ಶಾಂತಾ ಜಗದೀಶ ನಡೆಸಿಕೊಟ್ಟರು. ಪ್ರಾರಂಭದಲ್ಲಿ ಅತಿಥಿಗಳಿಗೆ ಗೌರವ ಸೂಚಕವಾಗಿ ವಿದ್ಯಾರ್ಥಿಗಳಿಂದ ಸಾಮೂಹಿಕ ವ್ಯಾಯಾಮ ಪ್ರದರ್ಶನವನ್ನು ಶ್ರೀ ಈಶ್ವರ್ ನಡೆಸಿಕೊಟ್ಟರು. ಸಮಾರಂಭಕ್ಕೆ ಊರಿನ ಗಣ್ಯರು ಮತ್ತು ಪೋಷಕ ವೃಂದದವರು ಕಿಕ್ಕಿರಿದು ನೆರೆದಿದ್ದು ಸಮಾರಂಭವು ಆಕರ್ಷಕ ಮತ್ತು ಅರ್ಥಪೂರ್ಣವಾಗಿತ್ತು.

–ಈಶ್ವರ್



ವಚನಗೋಷ್ಠಿಗೆ ಬಹುಸಂಖ್ಯೆಯಲ್ಲಿ ಸೇರಿದ್ದ ಆಸಕ್ತರು





# ಹಾವೇರಿಯಲ್ಲಿ ರಾಜ್ಯಮಟ್ಟದ ಐದನೆಯ ಮಹಿಳಾ ಸಮಾವೇಶ

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕದಳಿ ಮಹಿಳಾ ವೇದಿಕೆಯ ರಾಜ್ಯಮಟ್ಟದ ಐದನೆಯ ಮಹಿಳಾ ಸಮಾವೇಶ ಬರುವ ಡಿಸೆಂಬರ್ ೩ ಮತ್ತು ೪ರಂದು ಹಾವೇರಿಯಲ್ಲಿ ನಡೆಯುವುದು ಎಂದು ಅಧ್ಯಕ್ಷ ಶ್ರೀ ಗೊ.ರು. ಚನ್ನಬಸಪ್ಪ ತಿಳಿಸಿದರು.

ಹಾವೇರಿಯ ಹುಕ್ಕೇರಿಮಠ ಮಹಿಳಾ ಮಹಾವಿದ್ಯಾಲಯದ ಸಭಾಭವನದಲ್ಲಿ ರಾಜ್ಯ ಮಹಿಳಾ ಸಮಾವೇಶದ ಸಮಾಲೋಚನಾ ಸಭೆಯನ್ನು ಉದ್ಘಾಟಿಸಿ ಅವರು ಸಮಾವೇಶದ ದಿನವನ್ನು ಪ್ರಕಟಿಸಿದರು.

ಹಾನಗಲ್ಲ ತಾಲ್ಲೂಕಿನ ಶಾಸಕ ಸಿ.ಎಂ. ಉದಾಸಿ ಅವರು ಮುಖ್ಯ ಅತಿಥಿಯಾಗಿ "ಜಿಲ್ಲೆಗೆ ಬಂದ ಈ ಅವಕಾಶವನ್ನು ಎಲ್ಲರೂ ಸದುಪಯೋಗಪಡಿಸಿಕೊಳ್ಳಬೇಕು. ಸಮಾವೇಶದ ಯಶಸ್ಸಿಗೆ ಹಾನಗಲ್ಲ ತಾಲ್ಲೂಕಿನಿಂದ ಒಂದು ಲಕ್ಷ ರೂ. ಸಂಗ್ರಹಿಸಿಕೊಡುವುದಾಗಿ ಭರವಸೆಯಿತ್ತು ಸಮಾವೇಶಕ್ಕೆ ಮಾನಸಿಕವಾಗಿ ಸಿದ್ಧರಾಗೋಣ" ಎಂದು ಹೇಳಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಹಾವೇರಿ ತಾಲ್ಲೂಕಿನ ಶಾಸಕ ಶ್ರೀ ಶಿವರಾಜ ಸಜ್ಜನರ "ಸಾಹಿತ್ಯಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕವಾಗಿ ಮಹಿಳೆಯರು ಸಂಘಟಿತರಾಗಬೇಕಾದರೆ ಇಂತಹ ಸಮಾವೇಶಗಳು ಅಗತ್ಯ. ಸಮಾವೇಶಕ್ಕೆ ಎಲ್ಲ ರೀತಿಯ ನೆರವು ನೀಡುವದಾಗಿ ತಿಳಿಸಿ ರಾಜ್ಯದಲ್ಲಿಯೇ ಇದೊಂದು ಮಾದರಿ ಸಮಾವೇಶವನ್ನಾಗಿ ಮಾಡೋಣ" ಎಂದರು.

ಹುಕ್ಕೇರಿ ಮಠ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಶ್ರೀ ಎಸ್.ಎಸ್. ಮುಷ್ಠಿ ಅಧ್ಯಕ್ಷತೆ ವಹಿಸಿ ಸಮಾವೇಶದ ಯಶಸ್ಸಿಗಾಗಿ ಎಲ್ಲ ರೀತಿಯ ಸಹಕಾರ ನೀಡುವುದಾಗಿ ತಿಳಿಸಿದರು.

ರಾಣಿಬೆನ್ನೂರಿನ ಮಹಿಳಾ ಮಹಾವಿದ್ಯಾಲಯದ ಪ್ರಾಚಾರ್ಯ ಆರ್.ಎಂ. ಕುಬೇರಪ್ಪ, ಹಿರೇಕೆರೂರಿನ ಗುರುಶಾಂತ ಯತ್ತಿನಹಳ್ಳಿ, ಹಾನಗಲ್ಲಿನ ಶ್ರೀಮತಿ ಇಂದುಮತಿ ಪಾಟೀಲ, ರಾಣಿಬೆನ್ನೂರಿನ ಶ್ರೀಮತಿ ಶಕುಂತಲಾ ಜಂಬಿಗಿ, ಸವಣೂರಿನ ಶ್ರೀಮತಿ ಲಲಿತಾ ರಿತ್ತಿ, ಶಿಗ್ಗಾಂವಿಯ ಶ್ರೀಮತಿ ಲಲಿತಾ ಹಿರೇಮಠ, ಹಾವೇರಿಯ ಎಚ್.ಎನ್. ಮಾಡಳ್ಳಿಕರ, ಜಿಲ್ಲಾ ಬಸವ ಕೇಂದ್ರದ ಅಧ್ಯಕ್ಷೆ ಶ್ರೀಮತಿ ಶೋಭಾ ಮಾಗಾವಿ, ಎಸ್.ವಿ. ಹತ್ತಿ ಹಾಗೂ ಬ್ಯಾಡಗಿಯ ಶ್ರೀಮತಿ ಸಂಕಮ್ಮ ಸಂಕಣ್ಣನವರ ಮತ್ತಿತರ ಗಣ್ಯರು ಸಮಾವೇಶದ ಯಶಸ್ಸಿಗೆ ಸಹಕಾರ ನೀಡುವ ಕುರಿತು ಮಾತನಾಡಿದರು.

ಜಿಲ್ಲೆಯ ಪರಿಷತ್ತಿನ ಹಾಗೂ ಕದಳಿ ವೇದಿಕೆಯ ತಾಲ್ಲೂಕು ಘಟಕಗಳ ಪದಾಧಿಕಾರಿಗಳು, ಸಾಹಿತಿಗಳು, ಗಣ್ಯರು, ವರ್ತಕರು ಹಾಗೂ ವಿವಿಧ ಮಹಿಳಾ ಸಂಘಟನೆಗಳ ಪದಾಧಿಕಾರಿಗಳು ಸಭೆಯಲ್ಲಿ ಪಾಲ್ಗೊಂಡಿದ್ದರು.

ವೇದಿಕೆಯಲ್ಲಿ ಸಮಾವೇಶದ ಸ್ವಾಗತ ಸಮಿತಿ ಅಧ್ಯಕ್ಷೆ ಶ್ರೀಮತಿ ಹೇಮಾ ಶಿವರಾಜ ಸಜ್ಜನರ ಉಪಸ್ಥಿತರಿದ್ದರು.

ಜಿಲ್ಲಾ ಕದಳಿ ವೇದಿಕೆ ಅಧ್ಯಕ್ಷೆ ಶ್ರೀಮತಿ ಬಸಮ್ಮ ಹಳಕೊಪ್ಪ ಸ್ವಾಗತಿಸಿದರು. ಪರಿಷತ್ ಜಿಲ್ಲಾಧ್ಯಕ್ಷ ಹನುಮಂತಗೌಡ ಗೊಲ್ಲರ ಪ್ರಾಸ್ತಾವಿಕ ಭಾಷಣ ಮಾಡಿದರು. ಕಾರ್ಯದರ್ಶಿ ಮಾರುತಿ ಶಿಡ್ಲಾಪುರ ಕಾರ್ಯಕ್ರಮ ನಿರೂಪಿಸಿದರು. ಶಿಕ್ಷಣ ಮಹಾವಿದ್ಯಾಲಯದ ಪ್ರಾಚಾರ್ಯ ಬಿ. ಬಸವರಾಜ ವಂದಿಸಿದರು.

## ಹಾವೇರಿಯಲ್ಲಿ ಪರಿಷತ್, ಕದಳಿ ಘಟಕಗಳ ಪುನಶ್ಚೇತನಾ ಕಾರ್ಯಕ್ರಮ

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಜಿಲ್ಲಾ ಘಟಕ ಹಾಗೂ ಜಿಲ್ಲಾ ಕದಳಿ ವೇದಿಕೆ ಆಶ್ರಯದಲ್ಲಿ ಹಾವೇರಿಯ ಹುಕ್ಕೇರಿಮಠ ಮಹಿಳಾ ವಿದ್ಯಾಲಯದ ಸಭಾಭವನದಲ್ಲಿ ಪರಿಷತ್ತು ಹಾಗೂ ಕದಳಿ ತಾಲ್ಲೂಕು ಘಟಕಗಳ ಪುನಶ್ಚೇತನಾ ಕಾರ್ಯಕ್ರಮ ನಡೆಯಿತು.

ಆಖಿಲ ಭಾರತ ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷ ಶ್ರೀ ಗೊ.ರು. ಚನ್ನಬಸಪ್ಪ ಅವರು ಪುನಶ್ಚೇತನಾ ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಜಿಲ್ಲೆಯ ತಾಲ್ಲೂಕು ಘಟಕಗಳ ನೂತನ ಅಧ್ಯಕ್ಷರುಗಳಾದ ಮೃತ್ಯುಂಜಯ ಮುದ್ದಿ (ರಾಣಿಬೆನ್ನೂರು), ಪ್ರೊ. ಅರ್ಜುನ ಕಳ್ಳೇರ (ಹಿರೇಕೆರೂರ), ಪ್ರೊ. ವ್ಹಿ.ಪಿ. ಗುರಪ್ಪನವರ (ಹಾನಗಲ್ಲ), ಅಶೋಕ ಖುರ್ಷಾಪುರ (ಶಿಗ್ಗಾಂವ), ಪ್ರೊ. ಮೂಲಿಮನಿ (ಬ್ಯಾಡಗಿ) ಹಾಗೂ ಶ್ರೀಮತಿ ಮಧುಮತಿ ಚಿಕ್ಕಗೌಡರ (ಹಾವೇರಿ) ಅವರು ತಮ್ಮ ತಮ್ಮ ಘಟಕಗಳು ಕೈಗೊಳ್ಳಬೇಕೆಂದಿರುವ ಕಾರ್ಯಯೋಜನೆಗಳನ್ನು ಕುರಿತು ಮಾತನಾಡಿದರು.

ಜಿಲ್ಲಾ ಘಟಕದ ಅಧ್ಯಕ್ಷ ಹನುಮಂತಗೌಡ ಗೊಲ್ಲರ ಅಧ್ಯಕ್ಷತೆ ವಹಿಸಿ ಪರಿಷತ್ತು ಹಾಗೂ 'ಮಹಾಮನೆ' ಮಾಸಿಕಕ್ಕೆ ಆಜೀವ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಲು ವಿನಂತಿಸಿಕೊಂಡರು. ಕದಳಿ ವೇದಿಕೆಯ ಜಿಲ್ಲಾಧ್ಯಕ್ಷೆ ಶ್ರೀಮತಿ ಬಸಮ್ಮ ಹಳಕೊಪ್ಪ ವೇದಿಕೆಯಲ್ಲಿದ್ದರು. ಜಿಲ್ಲೆಯ ಪರಿಷತ್ತು ಹಾಗೂ ಕದಳಿ ತಾಲ್ಲೂಕು ಹಾಗೂ ಜಿಲ್ಲಾ ಘಟಕಗಳ ಪದಾಧಿಕಾರಿಗಳು ಪಾಲ್ಗೊಂಡಿದ್ದರು.

ಪ್ರೊ. ಮಾರುತಿ ಶಿಡ್ಲಾಪುರ ಸ್ವಾಗತಿಸಿದರು. ಎಸ್.ಆರ್. ಹಿರೇಮಠ ಕಾರ್ಯಕ್ರಮ ನಿರೂಪಿಸಿದರು. ಪ್ರೇಮಕ್ಕ ಶೆಟ್ಟರ ವಂದಿಸಿದರು.

–ಹನುಮಂತಗೌಡ ಗೊಲ್ಲರ



ಬಳ್ಳಾರಿ ಜಿಲ್ಲೆ

## ೫೨ನೆಯ ಮಹಾಮನೆ




ಶ್ರೀ ಎನ್. ಬಸವರಾಜ ಅವರಿಂದ ಉಪನ್ಯಾಸ. ವೇದಿಕೆಯಲ್ಲಿ ಶ್ರೀ ಎಸ್. ಸಂಜೀವಶೆಟ್ಟಿ, ಶ್ರೀ ಎಸ್. ಸತ್ಯನಾರಾಯಣಶಾಸ್ತ್ರಿ ಮತ್ತು ಕೆ.ಕೆ. ಮಂಜುನಾಥ

ಬಸವಣ್ಣನವರ 'ಕಳಬೇಡ ಕೊಲಬೇಡ; ಹುಸಿಯ ನುಡಿಯಲು ಬೇಡ; ಇದಿರು ಅಳಿಯಲು ಬೇಡ; ಅನ್ಯರಿಗೆ ಅಸಹ್ಯಪಡಬೇಡ' ಎಂಬ ಸಾಲುಗಳು ಇಡೀ ಜಗತ್ತಿನ ಮನುಕುಲವನ್ನೇ ಶುದ್ಧೀಕರಿಸಲು ಪ್ರಯತ್ನಿಸಿವೆ ಎಂದು ಶ್ರೀ ಎನ್. ಬಸವರಾಜ ಅಭಿಪ್ರಾಯಪಟ್ಟರು. ಅವರು ಹೊಸಪೇಟೆ ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತು ಏರ್ಪಡಿಸಿದ್ದ ೫೨ನೆಯ ಮಹಾಮನೆ ಕಾರ್ಯಕ್ರಮದಲ್ಲಿ ಮಾತನಾಡುತ್ತಿದ್ದರು.

ಹೆಚ್.ಎಂ. ಚನ್ನವೀರಸ್ವಾಮಿಗಳ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಆರಂಭಗೊಂಡಿತು. ಭವಾನಿಶಾಸ್ತ್ರಿ ಹಾಗೂ ಹೆಚ್. ಸಿದ್ಧಪ್ಪ ವಚನಗಳನ್ನು ಹಾಡಿದರು. ಅತಿಥಿಗಳಾಗಿ ಪಾಲ್ಗೊಂಡ ಎಸ್. ಸಂಜೀವ ಶ್ರೇಷ್ಠಿ ಮಾತನಾಡಿ, "ಅಮೂಲ್ಯವಾದ ಇಂತಹ ಕಾರ್ಯಕ್ರಮಗಳಿಗೆ ನಿಮ್ಮ ನಿಮ್ಮ ಮನೆಯಲ್ಲಿರುವ ಮಹಿಳೆಯರನ್ನು ಕರೆತರುವ ಪ್ರಯತ್ನ ಮಾಡಿ" ಎಂದರು. ಮತ್ತೊಬ್ಬ ಅತಿಥಿ ಕೆ.ಕೆ. ಮಂಜುನಾಥ ಉಪಸ್ಥಿತರಿದ್ದರು. ಅಧ್ಯಕ್ಷತೆ ವಹಿಸಿದ್ದ ಎಸ್. ಸತ್ಯನಾರಾಯಣಶಾಸ್ತ್ರಿ ಮಾತಿನ ಮಹತ್ವ ಕುರಿತು ತಮ್ಮ ವಿಚಾರಗಳನ್ನು ತಿಳಿಸಿದರು. ಪರಿಷತ್ತಿನ ಗೌರವಾಧ್ಯಕ್ಷ ಜಿ. ನಾಗಲಿಂಗಪ್ಪನವರು ಸ್ಥಳಾವಕಾಶ ಕಲ್ಪಿಸಿಕೊಟ್ಟರು. ಪರಿಷತ್ತಿನ ಅಧ್ಯಕ್ಷ ಜಿ. ಬಸಪ್ಪ ಪ್ರಾಸ್ತಾವಿಕ ನುಡಿಗಳನ್ನಾಡಿ, ಸರ್ವರನ್ನು ಸ್ವಾಗತಿಸಿದರು. ಕಾರ್ಯದರ್ಶಿ ಕೆ. ವೀರಭದ್ರ ನಿರೂಪಿಸಿದರು, ಹೆಚ್.ಎಂ. ಜಂಬುನಾಥ ವಂದಿಸಿದರು.

ವರದಿ : ಜಂಬುನಾಥ ಹೆಚ್.ಎಂ.

## ಗ್ರಾಮಾಂತರದಲ್ಲಿ ಶರಣ ಚಿಂತನೆ

ಗದುಗಿನ ತೋಂಟದಾರ್ಯ ಮಠದ ಬಸವರಾಜ ವೆಂಕಟಾಪುರ ಶರಣರು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಬಳ್ಳಾರಿ ಜಿಲ್ಲಾ ಘಟಕ ಕೋಳೂರು ಗ್ರಾಮದಲ್ಲಿ ಏರ್ಪಡಿಸಿದ್ದ ಗ್ರಾಮಾಂತರ ೨ನೆಯ ಮಹಾಮನೆ ಕಾರ್ಯಕ್ರಮದಲ್ಲಿ 'ಗುರು ಕರುಣ ತ್ರಿವಿಧಿ' ಕುರಿತು ಉಪನ್ಯಾಸ ನೀಡಿದರು.

ಜಿಲ್ಲಾ ಅಧ್ಯಕ್ಷರಾದ ಕೆ.ಬಿ. ಸಿದ್ದಲಿಂಗಪ್ಪನವರು ಪ್ರಾಸ್ತಾವಿಕವಾಗಿ ಮಾತನಾಡಿದರು. ಶಾನವಾಸಪುರದ ಶ್ರೀ ಜಗದ್ಗುರು ದಾರುಕಾಚಾರ್ಯ ಆಶ್ರಮದ ಷ.ಬ್ರ. ಪ್ರಸನ್ನ ಮಲ್ಲಿಕಾರ್ಜುನ ಶಿವಾಚಾರ್ಯರು ಸಾನ್ನಿಧ್ಯ ವಹಿಸಿದ್ದರು.




ಉಪನ್ಯಾಸ : ಬಸವರಾಜ ವೆಂಕಟಾಪುರ ಶರಣರು, ಗದಗ, ಷ.ಬ್ರ. ಪ್ರಸನ್ನ ಮಲ್ಲಿಕಾರ್ಜುನಸ್ವಾಮಿಗಳು, ಕೆ.ಬಿ. ಸಿದ್ದಲಿಂಗಪ್ಪ

ಹೊಳಗುಂದಿ ಮಲ್ಲಿಕಾರ್ಜುನ ಸ್ವಾಮಿಗಳ ಮನೆಯಲ್ಲಿ ಜರುಗಿದ ಕಾರ್ಯಕ್ರಮದ ಪ್ರಾರ್ಥನೆ ವಿದ್ಯಾರ್ಥಿಗಳಿಂದಲೂ, ಭಜನೆ ಶ್ರೀರಾಮಲಿಂಗೇಶ್ವರ ಭಜನಾಮಂಡಳಿ ಸದಸ್ಯರಿಂದಲೂ ನಡೆಯಿತು. ಭಕ್ತಿಸೇವೆ ಸಲ್ಲಿಸಿದ ಶ್ರೀ ಬಿ. ರಮೇಶಾಚಾರಿ, ಶ್ರೀ ಹಡಪದ ಲಿಂಗಯ್ಯ, ಶ್ರೀ ಕೆ.ಎಂ. ನಂಜುಂಡಸ್ವಾಮಿ, ಶ್ರೀ ಆರ್. ಗಂಗಾಧರಯ್ಯ, ಶ್ರೀ ಟಿ. ಮಹಂತಣ್ಣ ಇವರನ್ನು ಗೌರವಿಸಲಾಯಿತು. ಕಾರ್ಯಕ್ರಮದಲ್ಲಿ ತಾಂತ್ರಿಕ ಅಧಿಕಾರಿಗಳಾದ ಎಸ್. ಮನಮೋಹನ ಮತ್ತು ದಮ್ಮೂರು, ಮದಿರೆ, ಸೋಮಸಮುದ್ರ ಗ್ರಾಮದ ಜನರು ಪಾಲ್ಗೊಂಡಿದ್ದರು. ಹೊಳಗುಂದಿ ಮಲ್ಲಿಕಾರ್ಜುನ ಸ್ವಾಮಿಗಳ ಶರಣು ಸಮರ್ಪಿಸಿದರು.

-ವರದಿ : ಕೆ.ಬಿ. ಸಿದ್ಧಲಿಂಗಪ್ಪ





ಹಾವೇರಿ ಜಿಲ್ಲೆ

## 'ಎಳೆಯರ ಲೋಕ'ದ ಉದ್ಘಾಟನೆ




ಹಾವೇರಿಯಲ್ಲಿ ಹೊಸಮಠದ ಪೂಜ್ಯ ಶ್ರೀ ಶಿವಬಸವ ಸ್ವಾಮೀಜಿ ಅವರಿಂದ 'ಎಳೆಯರ ಲೋಕ' ಉದ್ಘಾಟನೆ

ಅಧ್ಯಕ್ಷತೆ : ಹನುಮಂತಗೌಡ ಗೊಲ್ಲರ

ಅತಿಥಿಗಳು : ಶ್ರೀಮತಿ ಶೋಭಾ ಮಾಗಾವಿ, ಶ್ರೀಮತಿ ಸುನಂದಾ ಶಾಗೋಟಿ, ಪ್ರೊ. ಆರ್.ಕೆ. ಬೆಳ್ಳಿಗಟ್ಟಿ

ವೇದಿಕೆಯಲ್ಲಿ : ಶ್ರೀಮತಿ ಮಧುಮತಿ ಚಿಕ್ಕಗೌಡರ, ಜಿ.ಎನ್. ಕರಬಸನಗೌಡರ, ಪ್ರತಿಭಾ ಮೂಲಿಮನಿ, ವೀರಣ್ಣ ಶೀಲವಂತರ ಮತ್ತಿತರರು.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕದಳಿ ಮಹಿಳಾ ವೇದಿಕೆ ಆಶ್ರಯದಲ್ಲಿ ಮಕ್ಕಳ ಚಟುವಟಿಕೆಗಳಿಗಾಗಿ ಹಾವೇರಿ ಹೊಸಮಠದ ಶ್ರೀ ಶಿವಬಸವ ಸ್ವಾಮೀಜಿಯವರು 'ಎಳೆಯರ ಲೋಕ'ವನ್ನು ಉದ್ಘಾಟಿಸಿ ಮಕ್ಕಳ ಪ್ರತಿಭೆಗೆ 'ಎಳೆಯರ ಲೋಕ' ದಾರಿದೀಪವಾಗಲಿ ಎಂದು ಹಾರೈಸಿದರು.

ನಿವೃತ್ತ ಉಪನ್ಯಾಸಕ ಪ್ರೊ. ಆರ್.ಕೆ. ಬೆಳ್ಳಿಗಟ್ಟಿ ಅತಿಥಿಯಾಗಿ 'ಬಸವಣ್ಣ ಒಂದು ಸಮುದಾಯಕ್ಕೆ ಮಾತ್ರ ಸೀಮಿತವಾಗಿಲ್ಲ ಅವರೊಬ್ಬ ಮಹಾನ್ ಮಾನವತಾವಾದಿ' ಎಂದು ಹೇಳಿದರು.

ಪರಿಷತ್ ಜಿಲ್ಲಾಧ್ಯಕ್ಷ ಹನುಮಂತಗೌಡ ಗೊಲ್ಲರ ಅಧ್ಯಕ್ಷತೆ ವಹಿಸಿ ಜಾತಿ-ಧರ್ಮಗಳ ಸಂಘರ್ಷದಲ್ಲಿ ಸಮಾಜ, ರಾಷ್ಟ್ರ ನಲುಗಿಹೋಗಿದೆ. ಅನುಕರಣೀಯ ಆದರ್ಶಗಳ ಕೊರತೆ ಎದ್ದು ಕಾಣುತ್ತದೆ ಎಂದು ಅಭಿಪ್ರಾಯಪಟ್ಟರು.

ಜಿಲ್ಲಾ ಬಸವ ಕೇಂದ್ರದ ಅಧ್ಯಕ್ಷೆ ಶೋಭಾ ಮಾಗಾವಿ, ತಾಲ್ಲೂಕು ಚುಟುಕು ಸಾಹಿತ್ಯ ವೇದಿಕೆ ಅಧ್ಯಕ್ಷೆ ಸುನಂದಾ ಶಾಗೋಟಿ ಸಂದರ್ಭೋಚಿತವಾಗಿ ಮಾತನಾಡಿದರು. ಇದೇ ಸಂದರ್ಭದಲ್ಲಿ ಕಲಾವಿದರಾದ ಪ್ರತಿಭಾ ಮೂಲಿಮನಿ ಹಾಗೂ ವೀರಣ್ಣ ಶೀಲವಂತರ ಅವರನ್ನು ಸನ್ಮಾನಿಸಲಾಯಿತು. ನಂತರ ಎಳೆಯರ ಲೋಕದ ಬಾಲಪ್ರತಿಭೆಗಳ ವಚನ ಗಾಯನ, ನೃತ್ಯ ಪ್ರದರ್ಶನ ನಡೆದವು.

ಸಿ.ಎನ್. ಬಡ್ನಿ, ವಿನಾಯಕ ಚಿಕ್ಕಮಠ ಪ್ರಾರ್ಥನೆ ಗೀತೆ ಹಾಡಿದರು. ಪ್ರಚಾರ್ಯ ಎಚ್.ಎಸ್. ಚೆನ್ನಿಕಟ್ಟಿ ಸ್ವಾಗತಿಸಿದರು. ಪರಿಷತ್ ತಾಲ್ಲೂಕು ಅಧ್ಯಕ್ಷೆ ಮಧುಮತಿ ಚಿಕ್ಕಗೌಡರ ಪ್ರಾಸ್ತಾವಿಕ ಭಾಷಣ ಮಾಡಿದರು. ಚನ್ನಬಸವಣ್ಣ ದೊಡ್ಡನವರು, ಜಮೀರ ರಿತ್ತಿ ಕಾರ್ಯಕ್ರಮ ನಿರ್ವಹಿಸಿದರು. ಸಂಜೀವಶೆಟ್ಟರ ವಂದಿಸಿದರು.

-ಹನುಮಂತಗೌಡ ಗೊಲ್ಲರ

ದಾವಣಗೆರೆ ಜಿಲ್ಲೆ

## ಮಾಸಿಕ ಕಾರ್ಯಕ್ರಮ

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಜಿಲ್ಲಾ ಘಟಕ ದಾವಣಗೆರೆ, ತಾಲ್ಲೂಕು ಘಟಕ ಚನ್ನಗಿರಿ ಅವರ ಸಂಯುಕ್ತಾಶ್ರಯದಲ್ಲಿ ಬೆಳ್ಳಿಗನೂಡು ಗ್ರಾಮದ ಎಲ್.ಪಿ. ಚಿದಾನಂದಮೂರ್ತಿ ಅವರ ಮನೆ ಅಂಗಳದಲ್ಲಿ ಸೆ. ೬ರಂದು ೨೧ನೇ ಮಾಸಿಕ ಮನೆ ಅಂಗಳದ ಮಹಾಮನೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಪಾಂಡೋಮಟ್ಟಿ ವಿರಕ್ತ ಮಠದ ಪೂಜ್ಯ ಶ್ರೀ ಗುರುಬಸವ ಸ್ವಾಮಿಗಳು ಸಾನ್ನಿಧ್ಯ ವಹಿಸಿದ್ದರು. ದಾವಣಗೆರೆ ಮೋತಿವೀರಪ್ಪ ಸರ್ಕಾರಿ ಪ.ಪೂ. ಕಾಲೇಜಿನ ಉಪನ್ಯಾಸಕ ಹಾಗೂ ಶರಣ ಸಾಹಿತ್ಯದ ಅನುಭಾವಿ ಜಿ.ಬಿ. ಚಂದ್ರಶೇಖರ್ ಅಲ್ಲಮಪ್ರಭುದೇವರನ್ನು ಕುರಿತು ಉಪನ್ಯಾಸ ನೀಡಿದರು. ಜಿಲ್ಲಾ ಘಟಕದ ಅಧ್ಯಕ್ಷ ಚಿಕ್ಕೋಳ್ ಈಶ್ವರಪ್ಪ ಪ್ರಾಸ್ತಾವಿಕವಾಗಿ ಮಾತನಾಡಿದರು. ತಾಲ್ಲೂಕು ಘಟಕದ ಅಧ್ಯಕ್ಷ ಹೆಚ್.ಎಸ್. ಮಲ್ಲಿಕಾರ್ಜುನಪ್ಪ ಅಧ್ಯಕ್ಷತೆ ವಹಿಸಿದ್ದರು. ಹಿರೇಕೋಗಲೂರು ಸ.ಪ.ಪೂ. ಕಾಲೇಜಿನ ಉಪನ್ಯಾಸಕ ಕೆ.ಸಿ. ಚಂದ್ರಶೇಖರ್ ಮಾತನಾಡಿದರು. ವೇದಿಕೆಯಲ್ಲಿ ತಾಲ್ಲೂಕು ರೈತ ಸಂಘದ ಉಪಾಧ್ಯಕ್ಷ ಜಿ.ಎಸ್. ನಾಗೇಂದ್ರಪ್ಪ, ಎಸ್.ಎನ್. ರುದ್ರಮುನಿ, ಶ್ರೀಮತಿ ಬಸಮ್ಮ ಎಲ್.ಪಿ. ದೇವೀರಪ್ಪ, ಪ್ರಾಚಾರ್ಯ ಕೆ.ಎಸ್. ಶಿವಪ್ಪ, ತಾಲ್ಲೂಕು ರೈತ ಸಂಘದ ಗೌರವಾಧ್ಯಕ್ಷ ಜಿ.ಎಂ. ಪರಮೇಶ್ವರಪ್ಪ ಉಪಸ್ಥಿತರಿದ್ದರು. ಬೆಳ್ಳಿಗನೂಡು ಶ್ರೀ ಬಸವೇಶ್ವರ ಭಜನಾ ಸಂಘದವರು ವಚನ ಗೀತೆ ಹಾಡಿದರು. ಕುಮಾರಿ ಗೀತಾ, ಕುಮಾರಿ ಮಂಗಳಾ ವಚನ ಪ್ರಾರ್ಥನೆ ಮಾಡಿದರು. ಹೆಚ್.ಟಿ. ಉಮಾಪತಿ ಸ್ವಾಗತಿಸಿದರು. ಕಾರ್ಯದರ್ಶಿ ಬಿ.ಎಂ. ನಿಜಲಿಂಗಪ್ಪ ಕಾರ್ಯಕ್ರಮ ನಿರೂಪಿಸಿ ಎಲ್.ಪಿ. ಚಿದಾನಂದಮೂರ್ತಿ ಶರಣು ಸಮರ್ಪಿಸಿದರು.

ವರದಿ : ಚಿಕ್ಕೋಳ್ ಈಶ್ವರಪ್ಪ

## ಹಾವೇರಿ ಜಿಲ್ಲೆ



ಹಾವೇರಿಯಲ್ಲಿ ಶರಣ ಸಾಹಿತ್ಯ ಪರಿಷತ್ತಿನ ಹಾಗೂ ಕದಳಿ ವೇದಿಕೆ ಜಿಲ್ಲಾ ಹಾಗೂ ತಾಲ್ಲೂಕು ಘಟಕಗಳ ಪುನಶ್ಚೇತನಾ ಕಾರ್ಯಕ್ರಮವನ್ನು ಅ.ಭಾ.ಶ.ಸಾ.ಪ. ಅಧ್ಯಕ್ಷ ಶ್ರೀ ಗೊ.ರು. ಚನ್ನಬಸಪ್ಪನವರು ಉದ್ಘಾಟಿಸಿದರು. ಮೃತ್ಯುಂಜಯ ಮುದ್ದಿ, ಮಾರುತಿ ಶಿಡ್ಲಾಪುರ, ಬಸಮ್ಮ ಹಳಕೊಪ್ಪ ಎಸ್.ಆರ್. ಹಿರೇಮಠ, ಹನುಮಂತಗೌಡ ಗೊಲ್ಲರ ಹಾಗೂ ಪ್ರಾಚಾರ್ಯ ಆರ್.ಎಂ. ಕುಬೇರಪ್ಪ ಮತ್ತಿತರರು.

### ವಚನ ಚಿಂತನ



ಹಾವೇರಿ ಜಿಲ್ಲಾ ಸವಣೂರಿನಲ್ಲಿ ಕದಳಿ ವೇದಿಕೆಯ ೧೯ನೆಯ ಮಾಸಿಕ ಚಿಂತನ ಕಾರ್ಯಕ್ರಮ

ಸಾನ್ನಿಧ್ಯ : ಪೂಜ್ಯ ಶ್ರೀ ಕುಮಾರ ಸ್ವಾಮಿಗಳು ಮತ್ತು ಶ್ರೀ ಮಹಂತ ಸ್ವಾಮಿಗಳು, ವೇದಿಕೆಯಲ್ಲಿ : ಶ್ರೀಮತಿ ಅಲಕಾ ರಾಖಶೇಖರ ಸಿಂಧೂರ, ದೀಪಾ, ರಾಜೇಶ್ವರಿ, ಅಕ್ಕಮ್ಮ, ಅನಸೂಯಾ ಹಾವಣಗಿ ಶಕುಂತಲಾ, ಲಲಿತಾ, ಕುಸುಮಾ ಗುಂಜಳ ಮತ್ತಿತರರು

ನಿರೂಪಣೆ : ಲಲಿತಾ ರಿತ್ತಿ, ವಂದನೆ : ಪೂರ್ಣಿಮಾ ಬೆಣ್ಣಿ

–ವರದಿ : ಹನುಮಂತಗೌಡ ಗೊಲ್ಲರ



ಹಾವೇರಿ ತಾಲ್ಲೂಕು ಕದಳಿ ಮಹಿಳಾ ವೇದಿಕೆಯ ೩೩ನೆಯ ಮಾಸಿಕ ವಚನ ಚಿಂತನ ಗೃಹಗೋಷ್ಠಿ. ಶ್ರೀಮತಿ ಲಲಿತಾ ಹುಗ್ಗಿ ಅವರ ಗೃಹ. ಅಧ್ಯಕ್ಷತೆ : ಶ್ರೀ ಬಸಮ್ಮ ಹಳಕೊಪ್ಪದ

ಅತಿಥಿಗಳು : ಶ್ರೀ ಹನುಮಂತಗೌಡ ಗೊಲ್ಲರ, ಆರ್.ಎಸ್. ಚೌಶೆಟ್ಟಿ

ವಚನ ವಿಶ್ಲೇಷಣೆ : ಶ್ರೀಮತಿ ಉಷಾ ಕರಬಸನಗೌಡ್ರ

ಪ್ರಾಸ್ತಾವಿಕ ಭಾಷಣ : ಶ್ರೀಮತಿ ಗೌರಮ್ಮ ಸುಗಾವಿ

ಕಾರ್ಯಕ್ರಮ ನಿರೂಪಣೆ : ಶ್ರೀಮತಿ ಪ್ರೇಮಕ್ಕ ಶೆಟ್ಟರ

ವಂದನೆ : ಶ್ರೀಮತಿ ಶಾರದಾ ಕೋರಿ

### ವಿಶೇಷೋಪನ್ಯಾಸ

ಬಾಗಲಕೋಟೆ




ಬಾಗಲಕೋಟೆ ಜಿಲ್ಲಾ ಮುಧೋಳ ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತು 'ಶರಣ ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ' ಎಂಬ ವಿಷಯ ಕುರಿತು ನಡೆಸಿದ ಉಪನ್ಯಾಸ ಕಾರ್ಯಕ್ರಮ. ವೇದಿಕೆಯಲ್ಲಿ : ಶ್ರೀ ಬಸವಲಿಂಗಪ್ಪ ರಾಮತೀರ್ಥ, ಉಪನ್ಯಾಸಕ ಶ್ರೀ ರಂಜಾನ್ ದರ್ಗಾ, ಅಧ್ಯಕ್ಷತೆ ವಹಿಸಿದ್ದ ಡಾ. ಶಿವಾನಂದ ಕುಬಸದ ಮತ್ತು ಅತಿಥಿಗಳಾಗಿದ್ದ ಶ್ರೀ ವಾಸಣ್ಣ ದೇಸಾಯಿ. ರಾಜೇಶ್ವರಿ ಗೊಬ್ಬೂರ ಅವರಿಂದ ವಚನ ಪ್ರಾರ್ಥನೆ.ಶ್ರೀ ಬಿ.ಪಿ. ಹಿರೇಸೋಮಣ್ಣನವರಿಂದ ಪರಿಚಯ. ವಿಶ್ವನಾಥ ಮುನವಳ್ಳಿ ಅವರಿಂದ ವಂದನಾರ್ಪಣೆ. ಮಾಜಿ ಸಂಸದ ಎಸ್.ಟಿ. ಪಾಟೀಲ, ಶ್ರೀ ಟಿ.ಪಿ. ಬುದ್ನಿ ಶ್ರೀ ಜಿ.ಆರ್. ಕಾಳಗಿ, ಶ್ರೀ ಬಿ.ಎಸ್. ಕೋಲಾರ ಮೊದಲಾದ ಪ್ರಮುಖರು ಪಾಲುಗೊಂಡಿದ್ದರು.





## ಬೆಂಗಳೂರು ನಗರ ಜಿಲ್ಲೆ

### ಚೈತನ್ಯ ಸಂಜೆ




ಬಸವ ಸಮಿತಿಯ ಶ್ರಾವಣ ಮಾಸಾಚರಣೆಯ ಅಂಗವಾಗಿ ದಿನಾಂಕ ೨-೯-೦೫ರಂದು ನಡೆದ ೮೫ನೆಯ 'ಚೈತನ್ಯ ಸಂಜೆ' ಕಾರ್ಯಕ್ರಮ : ಶ್ರೀಮತಿ ಪ್ರಮೀಳಾ ಪಾಲನೇತ್ರ ಅವರಿಂದ ಉಪನ್ಯಾಸ. ವೇದಿಕೆಯಲ್ಲಿ : ಶ್ರೀ ಕೆ.ಆರ್. ಜಯದೇವಪ್ಪ ಶ್ರೀ ದಿಬ್ಬೂರು ಸಿದ್ಧಲಿಂಗಪ್ಪ, ಶ್ರೀ ರೇಣುಕ ಪ್ರಸಾದ್ ಮತ್ತು ಶ್ರೀ ಜಿ.ಆರ್. ಗುರುಮೂರ್ತಿ



ಬೆಂಗಳೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಎಪ್ಪತ್ತೊಂಬತ್ತನೆಯ 'ಚೈತನ್ಯ ಸಂಜೆ'. ಚಿಕ್ಕಮಗಳೂರು ಜಿಲ್ಲಾ ನ್ಯಾಯಾಧೀಶರಾದ ಶ್ರೀ ಟಿ. ನಾಗಪ್ಪ ಅವರಿಂದ 'ವಚನ ಸಾಹಿತ್ಯ–ವೈಜ್ಞಾನಿಕ ದೃಷ್ಟಿ' ಕುರಿತ ಉಪನ್ಯಾಸ ವೇದಿಕೆಯಲ್ಲಿ : ಶ್ರೀ ದಿಬ್ಬೂರು ಸಿದ್ಧಲಿಂಗಪ್ಪ ಮತ್ತು ಶ್ರೀ ಗೊ.ರು.ಚ.

### ದತ್ತಿ ಉಪನ್ಯಾಸ



ಬೆಂಗಳೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ನಡೆಸಿದ ಮಾದೇನಹಳ್ಳಿ ಮಲ್ಲಿಕಾರ್ಜುನಯ್ಯ ದತ್ತಿ ಕಾರ್ಯಕ್ರಮ : ಶ್ರೀಮತಿ ಜಯಾ ರಾಜಶೇಖರ್ ಅವರಿಂದ ಉಪನ್ಯಾಸ. ವೇದಿಕೆಯಲ್ಲಿ : ಶ್ರೀ ದಿಬ್ಬೂರು ಸಿದ್ಧಲಿಂಗಪ್ಪ, ಶ್ರೀ ಗೊ.ರು.ಚ. ಮತ್ತು ಶ್ರೀಮತಿ ಗೀತಾಜಯಂತ್

## ಕೊಪ್ಪಳ ಜಿಲ್ಲೆ




ಕೊಪ್ಪಳ ಜಿಲ್ಲಾ ಗಂಗಾವತಿ ತಾಲ್ಲೂಕು ಹಿರೇಜಂತಕಲ್ ಬಸವ ಕೇಂದ್ರ 'ಮನೆಯಲ್ಲಿ ಮಹಾಮನೆ' ಕಾರ್ಯಕ್ರಮದಲ್ಲಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಸಿ.ಹೆಚ್. ನಾರನಾಳ ಅವರಿಂದ ಉಪನ್ಯಾಸ. ಉದ್ಘಾಟನೆ : ಶ್ರೀ ಎಸ್.ವಿ. ಪಾಟೀಲ್ ಗುಂಡೂರ

ಉಪಸ್ಥಿತಿ : ಬಸವ ಕೇಂದ್ರದ ಕಾರ್ಯಾಧ್ಯಕ್ಷ ಶ್ರೀ ಜಿ. ಶಿವಲಿಂಗಪ್ಪ ಮತ್ತು ಆನೇಗುಂದಿ ಬಸಪ್ಪ, ನಿರೂಪಣೆ : ಕೆ. ಬಸವರಾಜ

ಪ್ರಸಾದ ಸೇವೆ : ಶ್ರೀ ಚನ್ನಬಸವೇಶ್ವರ ದೇವಾಲಯ ಸಮಿತಿ

## ಶುಭಾಶಯಗಳು









## ಸಾದರ ಸ್ವೀಕಾರ

- **ವಚನ ವಿಹಾರ**
  ಲೇ : ಜಗದಾಂಬಾ ಮಲ್ಲೇದೇವರು
  ಪ್ರ : ಸಂವಹನ, ೧೨/೧ ಎ
  ಈವ್ನಿಂಗ್ ಬಜಾರ್ ಹಿಂಭಾಗ
  ಶಿವರಾಂಪೇಟೆ, ಮೈಸೂರು – ೫೭೦ ೦೦೧
  ಮು: ೨೦೦೫; ಪು: ೧೯೨; ಬೆಲೆ: ೧೦೦ ರೂ.

- **ಮುಕ್ತ್ಯಂಗನೆಯರು**
  ಲೇ : ಜಗದಾಂಬಾ ಮಲ್ಲೇದೇವರು
  ಪ್ರ : ಸಂವಹನ, ಮೈಸೂರು
  ಮು: ೨೦೦೫; ಪು: ೮೪; ಬೆಲೆ: ೬೦ ರೂ.

- **ನುಡಿಮಲ್ಲಿಗೆ**
  ಲೇ : ಜಗದಾಂಬಾ ಮಲ್ಲೇದೇವರು
  ಪ್ರ : ಸಂವಹನ, ಮೈಸೂರು
  ಮು: ೨೦೦೫; ಪು: ೧೦೮; ಬೆಲೆ: ೬೦ ರೂ.

- **ಇಟ್ಟ ಹೆಜ್ಜೆ ಪಟ್ಟ ಶ್ರಮ**
  ಸಂ : ಮಂ.ಅ. ವೆಂಕಟೇಶ್
  ಎನ್. ಆನಂದರಾವ್
  ಮು. ಪಾರ್ಥಸಾರಥಿ
  ಪ್ರ : ಬಿ.ಇ.ಎಲ್. ಕರ್ನಾಟಕ ಕಾರ್ಮಿಕ ಹಿತರಕ್ಷಕ ಸಮಿತಿ
  ಜಾಲಹಳ್ಳಿ, ಬೆಂಗಳೂರು – ೫೬೦ ೦೧೭
  ಮು: ೨೦೦೫; ಪು: ೧೮೩; ಬೆಲೆ: ೫೦ ರೂ.

- **ದೇಶಮುದ್ರೆ**
  ಸಂ : ಗೊ.ರು. ಚನ್ನಬಸಪ್ಪ
  ಮು: ೨೦೦೫; ಪು: ೩೪೦; ಬೆಲೆ: ೨೦೦ ರೂ.

- **In defence of Democracy**
  Ed : Ko. Channabasappa
  ಮು: ೨೦೦೫; ಪು: ೨೫೦; ಬೆಲೆ: ೨೫೦ ರೂ.

- **ಮಾನವತೆಯ ಮಂದಾರ**
  ಲೇ : ಟಿ.ಆರ್. ಮಹಾದೇವಯ್ಯ
  ಮು: ೨೦೦೫; ಪು: ೬೨; ಬೆಲೆ: ೫೦ ರೂ.
  (ಈ ಮೂರು ಪುಸ್ತಕಗಳ ಪ್ರಕಟಣೆ)
  ನ್ಯಾಯಮೂರ್ತಿ ಡಿ.ಎಂ. ಚಂದ್ರಶೇಖರ ಸ್ಮರಣ ಗ್ರಂಥ ಸಮಿತಿ
  ಸ್ಕಂದ, ಕುಮಾರಕೃಪ ರಸ್ತೆ
  ಬೆಂಗಳೂರು – ೫೬೦ ೦೦೧

- **ಗ್ರಾಮೋನ್ನತಿ**
  ಲೇ : ಡಾ. ಎಚ್.ಎಂ. ಮರುಳಸಿದ್ಧಯ್ಯ
  ಪ್ರ : ಐ.ಬಿ.ಹೆಚ್. ಪ್ರಕಾಶನ
  ಮು: ೨೦೦೫; ಪು: ೮೮; ಬೆಲೆ: ೬೦ ರೂ.

- **ಗಾಂಧೀಯ ಅರ್ಥಶಾಸ್ತ್ರ**
  ಅನು : ಡಾ. ಎಚ್.ಎಂ. ಮರುಳಸಿದ್ಧಯ್ಯ
  ಪ್ರ : ಐ.ಬಿ.ಹೆಚ್. ಪ್ರಕಾಶನ
  ಮು: ೨೦೦೫; ಪು: ೧೦೪; ಬೆಲೆ: ೭೫ ರೂ.

- **ಸ್ವರವಚನಗಳು**
  ಲೇ : ಡಾ. ಸರ್ವಮಂಗಳಾ ಶಂಕರ್
  ಪ್ರ : ಶ್ರೀ ತರಳಬಾಳು ಜಗದ್ಗುರು ಬೃಹನ್ಮಠ
  ಸಿರಿಗೆರೆ – ೫೭೭ ೫೪೧
  ಮು: ೨೦೦೫; ಪು: ೭೧೫; ಬೆಲೆ: ೨೭೫ ರೂ.

- **ಸತ್ವಸಾಗರ**
  ಲೇ : ಡಾ. ಅಶೋಕ ಮತ್ತಿಗಟ್ಟಿ
  ಪ್ರ : ಸೂರ್ಯಕಿರಣ ಪ್ರಕಾಶನ
  ನವಲೂರು, ಧಾರವಾಡ – ೯
  ಮು: ೨೦೦೫; ಪು: ೬೦; ಬೆಲೆ: ೪೦ ರೂ.

- **ಮಹಾಂತ**
  ಸಂ : ಡಾ. ಎಂ.ಎಸ್. ವಾಲಿ
  ಪ್ರ : ಎಂ.ಎಂ. ಹುಂಡೇಕಾರ ಅಭಿನಂದನ ಸಮಿತಿ, ವಿಜಾಪುರ
  ಮು: ೨೦೦೫; ಪು: ೨೯೬; ಬೆಲೆ: ೨೦೦ ರೂ.

- **ಜೋಳದರಾಶಿ ದೊಡ್ಡನಗೌಡರು**
  ಲೇ : ಡಾ. ಬಸವರಾಜ ಮಲಶೆಟ್ಟಿ
  ಪ್ರ : ಲಿಂಗಾಯತ ಅಧ್ಯಯನ ಸಂಸ್ಥೆ
  ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ
  ಗದಗ
  ಮು: ೨೦೦೫; ಪು: ೧೭೮; ಬೆಲೆ: ೨೫ ರೂ.

- **ಲಕ್ಕಣ್ಣ ದಂಡೇಶನ ಶಿವತತ್ತ್ವ ಚಿಂತಾಮಣಿ**
  ಸಂ : ಡಾ. ಕೆ. ರವೀಂದ್ರನಾಥ
  ಪ್ರ : ಪ್ರಭುದೇವರ ಜನಕಲ್ಯಾಣ ಸಂಸ್ಥೆ
  ಶ್ರೀ ಪ್ರಭುದೇವರ ಸಂಸ್ಥಾನ ವಿರಕ್ತ ಮಠ
  ಸೊಂಡೂರು – ೫೮೩ ೧೧೯
  ಮು: ೨೦೦೫; ಪು: ೯೦; ಬೆಲೆ: ೮೦ ರೂ.

MAHAMANE

Magazine Registration No. RNI 68294/97 -
Postal Registration No. CPMG/KA/BGS - 167/2003-05
Posted at Jayanagar H.P.O. on 5th of every month

October - 2005

# ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು (ರಿ.)

## ಮೈಸೂರು

### ಸದಸ್ಯತ್ವ ವಿವರ

| | | |
|---|---|---|
| ಮಹಾಪೋಷಕರು | - | 5000 ರೂ. |
| ಪೋಷಕರು | - | 3000 ರೂ. |
| ದಾತೃಗಳು | - | 1000 ರೂ. |
| ಆಜೀವ | - | 300 ರೂ. |
| ವಾರ್ಷಿಕ | - | 30 ರೂ. |

### ಸದಸ್ಯ ಸಂಸ್ಥೆಗಳು

| | | |
|---|---|---|
| ಪೋಷಕ | - | 2000 ರೂ. |
| ಆಜೀವ | - | 1000 ರೂ. |
| ವಾರ್ಷಿಕ | - | 100 ರೂ. |

### ಮಹಾಮನೆ ಜಾಹಿರಾತು ದರ

| | | |
|---|---|---|
| ರಕ್ಷಾಪುಟ | - 4 | ರೂ. 5,000 |
| ರಕ್ಷಾಪುಟ | - 2 ಅಥವಾ 3 | ರೂ. 3,000 |
| ಒಳಪುಟ | - ವಿಶೇಷ | ರೂ. 2,000 |
| ಒಳಪುಟ ಸಾಧಾರಣ | | ರೂ. 1,000 |
| ಅರ್ಧಪುಟ | | ರೂ. 600 |

### ಮಹಾಮನೆ ಚಂದಾದಾರರ ಗಮನಕ್ಕೆ

'ಮಹಾಮನೆ'ಗೆ ವಾರ್ಷಿಕ ಸದಸ್ಯರಾದವರು ದಯವಿಟ್ಟು ಸಕಾಲದಲ್ಲಿ ತಮ್ಮ ಸದಸ್ಯತ್ವವನ್ನು ನವೀಕರಿಸಿ ಸಹಕರಿಸಬೇಕಾಗಿ ವಿನಂತಿ. ಸದಸ್ಯತ್ವದ ಅವಧಿ ಮುಗಿದ ಮೇಲೂ 'ಮಹಾಮನೆ' ನಿಮ್ಮ ಮನೆಗೆ ಬರುವುದು ಕಷ್ಟವಾಗುತ್ತದೆ.

ನಿಮ್ಮ ಚಂದಾ ಅವಧಿ ಮುಗಿಯುವ ದಿನಾಂಕವನ್ನು 'ಮಹಾಮನೆ'ಯ ಲಕೋಟೆಯ ಮೇಲಿರುವ ನಿಮ್ಮ ವಿಳಾಸದ ಮೇಲೆ ಕಾಣಿಸಿದೆ. ದಯವಿಟ್ಟು ಗಮನಿಸಿ.

ವರ್ಷಕೊಮ್ಮೆ 120ರೂ. ಕಳುಹಿಸುವುದು ನಿಮ್ಮ ಕಾರ್ಯಭಾರದಲ್ಲಿ ಮರೆತುಹೋಗಿ ಬಿಡಬಹುದು. ಅದಕ್ಕೆ ಬದಲಾಗಿ ಒಮ್ಮೆಗೇ 700 ರೂ. ಕಳುಹಿಸಿ ಅಜೀವ ಸದಸ್ಯತ್ವ ಪಡೆದರೆ ನಮಗೆ ಮತ್ತು ನಿಮಗೆ ಇಬ್ಬರಿಗೂ ಅನುಕೂಲ.

ದಯವಿಟ್ಟು ಸಹಕರಿಸಿ.

- ಪ್ರಕಾಶಕರು.

ಜಾಹಿರಾತುಗಳ ಸಾಹಿತ್ಯದ ಜೊತೆಗೆ ಶುಲ್ಕವನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕಾರ್ಯಾಲಯಕ್ಕೆ ಕ್ರಾಸ್ ಮಾಡಿದ ಡಿ.ಡಿ. ಅಥವಾ ಮನಿ ಆರ್ಡರ್ ಮೂಲಕ "ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು **(ಮಹಾಮನೆ)**" ಈ ಹೆಸರಿನಲ್ಲಿ ಕಳುಹಿಸಬೇಕು.

- ಸಂಪಾದಕರು

### 'ಮಹಾಮನೆ' ಚಂದಾ ವಿವರ

| | |
|---|---|
| ಆಜೀವ ಸದಸ್ಯತ್ವ | 700-00 |
| ವಾರ್ಷಿಕ ಸದಸ್ಯತ್ವ | 120-00 |
| ಬಿಡಿ ಸಂಚಿಕೆ | 15-00 |

Published by : **Akhila Bharatha Sharana Sahithya Parishat (Regd.)**
1st Main, Shivarathrishwara Cricle, 8th Block, Jayanagar, Bangalore - 560 070
Printed by : **Lakshmi Mudranalaya,** 5th Main, Chamarajpet, Bangalore - 560 018
Editors : **M.G. Nagaraj and H.S. Siddagangappa**